

Copyright

# ಕೈ ಪಿ ಡಿ

# ಮುಂಬೈ ಸಾರ್ವಜನಿಕ ಜಿಮ್ಮೆ ಕಾಯ್ದೆ

೧೯೫೦

[ ನಿಯಮ ಮತ್ತು ತಿದ್ದುಪಡಿ ಸಹಿತ ]

Hand-book of Bombay Public Trusts Act

1950

# ಕೈಪಿಡಿ

## ಮುಂಬೈ ಸಾರ್ವಜನಿಕ ಜಿನ್ನೃ ಕಾಯ್ದೆ,
## ೧೯೫೦

( ನಿಯಮ ಮತ್ತು ತಿದ್ದು ಪಡೆ ಸಹಿತ )



# HAND BOOK

of

## Bombay Public Trusts Act 1950

*( With Rules & amendments up to date )*

1952



ಲೇಖಕರು :— ಪಿ. ಆಯ್. ಹಿರೇಮಠ ವಕೀಲರು ಹುಬ್ಬಳ್ಳಿ

ಹುಬ್ಬಳ್ಳಿ
ವಿಜಯದಶಮಿ  ೧—೧೨—೦
೨೮-೯-೧೯೫೨

ಪ್ರಕಾಶಕರು :—

ಟಿ. ಎ. ಬಳ್ಳೊಳ್ಳಿ ಬುಕ್ಕಡಿಪೊ

ದುರ್ಗದಬೈಲ ಹುಬ್ಬಳ್ಳಿ

( ಮೊದಲನೇ ಮುದ್ರಣ..೧೯೫೨ )



ಮುದ್ರಕರು :—

ನವಯುಗ ಪಾವರ ಪ್ರಿಂಟಿಂಗ ಪ್ರೆಸ್ ಹುಬ್ಬಳ್ಳಿ

# ನಿವೇದನೆ

ನಮ್ಮ ಸಂಸ್ಕೃತಿ ಮತ್ತು ಧರ್ಮದ ರಹಸ್ಯವನ್ನು ಬೀರುತ್ತಾ ಆಸ್ತಿಕತೆ, ದಾನ ಧರ್ಮಗಳ ಸ್ಫೂರ್ತಿಯನ್ನು ಕೊಡಬಲ್ಲವುಗಳಾಗಿ ನಿಂತಿರುವವೆಂದರೆ ಮಠ–ಮಂದಿರ, ಮಸೀದೆಗಳು. ಇವು ಕ್ಷೀಣವಾಗದೆ ಒಳ್ಳೆವ್ಯವಸ್ಥೆಯಲ್ಲಿ ಬೆಳೆದು ನಿಲ್ಲಬೇಕು ಎಂಬ ಸದಾಶಯದಿಂದ ಸಾರ್ವಜನಿಕ ಜಮ್ಮೆ ಕಾಯದೆಯನ್ನು ಮುಂಬಯಿ ಸರಕಾರವು ತಯಾರಿಸಿದೆ. ಈ ಸರಕಾರದ ಸದಾಶಯಕ್ಕೂ ನಮ್ಮ ವೃತ್ತಿಯ ಮೂಲಾಶಯಕ್ಕೂ ಬಹು ಹೊಂದಿಕೆಯಾದ್ದರಿಂದಲೇ ನಾನು ಈ ಕಾಯದೆ ಬಗ್ಗೆ ವಿಶೇಷ ಆಸಕ್ತಿಯನ್ನು ತೋರಿಸಿ ಈ ಪುಟ್ಟ ಪುಸ್ತಕವನ್ನು ಸಾರ್ವಜನಿಕರ ಮುಂದಿಡುತ್ತಿದ್ದೇನೆ.

ನನ್ನ ಹದಿನಾರು ವರುಷಗಳ ಕಾಯದೆ ಕ್ಷೇತ್ರದ ಸೇವೆಯಲ್ಲಿ ದೊಡ್ಡ ದೊಡ್ಡ ಮಠಗಳ ಹಕ್ಕು ಆಡಳಿತೆಯ ಬಗ್ಗೆ ವಾದವಿವಾದಗಳ ಖಟ್ಲೆಗಳು ನನ್ನ ಪಾಲಿಗೆಬಂದು ಅವುಗಳನ್ನು ಹಾಯಕೋರ್ಟಿನ ವರೆಗೂ ನಡೆಸಿ,ಪಡೆದ ಪರಿಶ್ರಮವೂ ಈ ಪುಸ್ತಕ ಬರೆವುದಕ್ಕೊಂದು ಸಹಾಯಕ ಶಕ್ತಿಯಾಯಿತು ಎಂದು ಇಲ್ಲಿ ಹೇಳಿಕೊಳ್ಳುವುದು ಅಪ್ರಾಸಂಗಿಕವಾಗಲಾರದು. ವಕೀಲನೆಂದರೆ ಪಕ್ಷಗಾರರ ವಕೀಲಮಾತ್ರವಲ್ಲ, ಸಮಾಜ, ಧರ್ಮ ಮತ್ತು ನ್ಯಾಯದ ವಕೀಲನೂ ಹೌದು ಎನ್ನುವ ದೃಷ್ಟಿಯಲ್ಲಿ ನಾನು ಸಮಾಜದ ಸೇವೆಯ ಕ್ಷೇತ್ರದಲ್ಲೂ ದುಡಿಯುತ್ತಿರುವ ದುಡಿತಕ್ಕೂ ಮತ್ತು ಈ ಕೈಪಿಡಿ ಬರೆಯುವುದಕ್ಕೂ ಪರಸ್ಪರ ಸಂಬಂಧವಿದೆಯೆಂದು ನಾನು ಭಾವಿಸಿಕೊಂಡಿದ್ದೇನೆ.

ಇದೀಗ ಹೊಸದಾಗಿ, ಹೊಸರೂಪದಲ್ಲಿ ಬಂದ ಕಾಯಿದೆಯಿದು. ಹಳ್ಳಿ ಹಳ್ಳಿಗಳಲ್ಲಿರುವ ಧಾರ್ಮಿಕಸಂಸ್ಥೆ ಮಠಮಂದಿರ, ಮಸೀದೆಗಳಲ್ಲಿ ಯಾವುದಕ್ಕೆ ಹೇಗೆ ಈ ಕಾಯಿದೆಯು ಅನ್ವಯಿಸುವುದು ಎಂಬುದನ್ನು ಎಲ್ಲರೂ ಸುಲಭವಾಗಿ ವ್ಯವಹಾರಿಕ ಭಾಷೆಯಲ್ಲಿ,ಬಳಕೆಯ ಮಾತಿನಲ್ಲಿ ತಿಳಿದುಕೊಳ್ಳಬೇಕಾದ ಅವಶ್ಯಕತೆ ಬಹುವಾಗಿದೆ. ಈ ಉದ್ದಿಶ್ಯದಿಂದಲೇ ಕಾಯದೆಯು ಜಾರಿಯಲ್ಲಿಬಂದ ಆರಂಭದಲ್ಲೇ ನಾನು ಕೆಲವು ವಿಮರ್ಶಾತ್ಮಕ ಲೇಖಗಳನ್ನು ಬರೆದೆನು. ಹುಬ್ಬ

ಳ್ಳಿಯ ಪ್ರಸಿದ್ಧ ದಿನಪತ್ರಿಕೆಯಾದ ನವಯುಗವು ಅದನ್ನು ಪ್ರಕಟಿಸಿ ನನಗೂ ಜನತೆಗೂ ಒಳ್ಳೆ ಉಪಕಾರ ಮಾಡಿತು. ಇದಕ್ಕಾಗಿ ನಾನು ನವಯುಗಕ್ಕೆ ಉಪಕೃತನಾಗಿರುವೆನು. ಪ್ರಕಟವಾದ ಆ ಲೇಖನಗಳ ಬಗ್ಗೆ ಜನರು ತೋರಿಸಿದ ಆಸಕ್ತಿ ಮತ್ತು ನನ್ನ ವ್ಯವಸಾಯ ಬಂಧುಗಳು ಸಾರ್ವಜನಿಕ ಜಿಮ್ಮೆಯ ಬಗ್ಗೆ ಸಾರ್ವಜನಿಕರ ತಿಳುವಳಿಕೆಗಾಗಿ ಕನ್ನಡದಲ್ಲಿ ಒಂದು ಪುಸ್ತಕವು ಪ್ರಕಟವಾಗುವುದು ಅವಶ್ಯವೆಂದು ಹೇಳಿ ಆ ಕೆಲಸಕ್ಕೆ ನನ್ನನ್ನು ಪ್ರೇರೇಪಿಸಿದ ಪ್ರೇರಣೆಯು ಈ ಕೈಪಿಡಿಯ ರೂಪದಲ್ಲಿ ತಮ್ಮೆಲ್ಲರ ಮುಂದೆ ಬಂದಿದೆ.

ಕಾಯಿದೆಯನ್ನು ಅಕ್ಷರಸಹ ಅನುವಾದ ಮಾಡಿ ಅದನ್ನಷ್ಟೇ ಮುಂದಿಟ್ಟರೆ ಅದರಿಂದ ಜನಸಾಮಾನ್ಯರಿಗೆ ನಿರೀಕ್ಷಿಸಿದಷ್ಟು ಪ್ರಯೋಜನವಾಗಲಾರದೆಂದು ತರ್ಕಿಸಿ, ಕಾಯಿದೆಯ ವ್ಯಾಪ್ತಿ ಮತ್ತು ಅದರ ಸಾಧಕ ಬಾಧಕಗಳ ಬಗ್ಗೆನನ್ನ ಅಭಿಪ್ರಾಯ ಇವುಗಳನ್ನು ಮೇಳವಿಸಿಕೊಂಡು ಅದಸ್ವರವುಟ್ಟಿಗೆ ಹಿನ್ನೆಲೆಯನ್ನೂ ಕೊಡಲು ಯತ್ನಿಸಿರುವೆನು.

ವಿಶೇಷತಃ, ವೀರಶೈವರು ಮಂದಿರಗಳಿಗಿಂತ ಮಠಗಳಿಗೆ ಹೆಚ್ಚು ಅಂಟಿಕೊಂಡವರಿರುತ್ತಾರೆ. ವೀರಶೈವಮಠಗಳು ಇತರ ಮಠಗಳಿಗಿಂತ ಭಿನ್ನವಾದವುಗಳಿರುವದರಿಂದ ಆ ಬಗ್ಗೆ ವಿಶೇಷ ವಿಮರ್ಶೆ ಮಾಡಲಾಗಿದೆ. ಬ್ರಾಹ್ಮಣ ಮತ್ತು ಇತರ ಸಮಾಜಗಳಲ್ಲಿ ಮಠಗಳು ವಿರಳವಿದ್ದದರಿಂದ ಆಬಗ್ಗೆ ಕೆಲವು ವಿಷಯಗಳನ್ನು ಪ್ರತಿಪಾದಿಸಿದ್ದಾಗಿದೆ. ಮುಸಲ್ಮಾನಸಮಾಜದಲ್ಲಿ ಮಸೀದೆ ಮತ್ತು ವಾಕ್ಫಆಸ್ತಿಗಳು ಸಹಿತ ಇದ್ದವರು ಇರುವರು.ಆ ವಿಷಯವನ್ನು ಸಹ ಸಂಕ್ಷೇಪವಾಗಿ ವಿವರಿಸಲಾಗಿದೆ. ಹೀಗೆ ಒಟ್ಟಾಗಿ ಎಲ್ಲ ಧರ್ಮಾನುಯಾಯಿಗಳಿಗೂ ಅನುಕೂಲವಾಗುವಂತೆ ಮತ್ತು ಎಲ್ಲ ಜಾತಿ-ಪಂಥದವರಿಗೂ ಉಪಯೋಗವಾಗುವಂಥ ಸಾರ್ವಜನಿಕ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳ ಬಗ್ಗೆ ವಿವರಣೆಮಾಡಿದ್ದೇನೆ. ಮಂದಿರಗಳ ಬಗ್ಗೆ ಸಾಮಾನ್ಯ ವಿಮರ್ಶೆ ಮಾಡಿದ್ದಾಗಿದೆ. ಮಠ ಮಂದಿರ ಮತ್ತು ಮಸೀದೆಗಳಿಗೆ ಸಂಬಂಧಪಟ್ಟವರಿಗೆಲ್ಲ ಸುಲಭವಾಗಿ ತಿಳಿಯಬೇಕೆಂಬ ಉದ್ದೇಶದಿಂದ ಬೇರೆ ಬೇರೆ ಭಾಗಗಳನ್ನು ಮಾಡಿದ್ದಾಗಿದೆ. ಮೊದಲನೇ ಭಾಗದಲ್ಲಿ ಈ ಕಾಯಿದೆಯ ಉಗಮ, ಮಠ, ಮಂದಿರ ಮತ್ತು ವಾಕ್ಫ ಇವುಗಳನ್ನು ವಿಸ್ತಾರವಾಗಿ ತಿಳಿಸಿ

ದ್ದಾಗಿದೆ. ಎರಡನೇ ಭಾಗದಲ್ಲಿ ಮೂಲ ಸಾರ್ವಜನಿಕ ಜಿಮ್ಮೆ ಕಾಯದೆಯ ಕನ್ನಡ ಅನುವಾದವಿದೆ. ಮೂರನೇ ಭಾಗದಲ್ಲಿ ಸಾರ್ವಜನಿಕ ಜಿಮ್ಮೆ ಕಾಯದೆಯ ಪ್ರಕಾರ ನಿಯಮಗಳನ್ನು ರಚಿಸಿದ್ದು ದುರಸ್ತಿಯಾದವುಗಳಿಗೆ ಅವುಗಳ ಸಂಕ್ಷಿಪ್ತ ಅನುವಾದವಮಾಡಿ ಜನತೆಗೆ ಉಪಯುಕ್ತವಾಗತಕ್ಕ ವಿಷಯಗಳನ್ನು ಕೊಟ್ಟಿದ್ದಾಗಿದೆ.

ಈ ಕಾಯದೆಯಲ್ಲಿ ಮಠ, ಮಂದಿರ ಮತ್ತು ವಾಕ್ಫ ಆಸ್ತಿಗಳ ಆಡಳಿತೆಯ ಮೇಲೆ ಹಾಕಿದ ಕಟ್ಟು ಕಡಿತಗಳು ಜನತೆಯ ಧಾರ್ಮಿಕ ಭಾವನೆಯು ನೋವಾಗದಂತೆ ಪರಿಪಾಲನೆ ಮಾಡುವ ರೀತಿಯಲ್ಲಿ ಸೌಮ್ಯವಾಗಿ ಉಳಿಯಲು ರಾಜ್ಯ ಸರಕಾರವು ನೋಡಿಕೊಳ್ಳುವದೆಂದು ಆಶಿಸಲಾಗಿದೆ.

ಪುಸ್ತಕ ವಿಸ್ತಾರದ ಭಯದಿಂದಲೂ, ನನ್ನ ವ್ಯವಸಾಯದಲ್ಲಿ ನನಗೆ ಸಾಕಷ್ಟು ಬಿಡುವು ಸಿಕ್ಕದಿರುವದರಿಂದಲೂ ಕಿರಿದರಲ್ಲೇ ಹಿರಿದಾದುದೆಲ್ಲವನ್ನು ಅಳವಡಿಸಿ ತಿಳಿಸಲು ಪ್ರಯತ್ನಿಸಿರುವೆ ಈ ನನ್ನ ಸೇವೆಯನ್ನು ಜನತೆಯು ಸ್ವಾಗತಿಸಿ ಪ್ರೋತ್ಸಾಹಿಸುವುದೆಂದು ಮತ್ತು ಈ ಪುಸ್ತಕದ ಪ್ರಯೋಜನ ಪಡೆದು ನನ್ನ ಶ್ರಮವನ್ನು ಸಾರ್ಥಕಗೊಳಿಸುವದೆಂದು ನಂಬಿದ್ದೇನೆ.

ಹುಬ್ಬಳ್ಳಿ
ವಿಜಯದಶಮಿ
ತಾ|| ೨೮—೯—೧೯೫೨

ಸಜ್ಜನ ವಿಧೇಯ,
ಸಿ. ಆಯ್. ಹಿರೇಮಠ.

# ಸಾರ್ವಜನಿಕ ಜಿಮ್ಮೆ ಕಾಯದೆ ಶಾಸನ ಸಮ್ಮತವಾದದ್ದು

## ೧) ಮುಂಬಯಿ ಹಾಯಕೋರ್ಟಿನ ಮುಖ್ಯ ನ್ಯಾಯಮೂರ್ತಿ ಶ್ರೀ ಚಗಲಾ

## (೨) ನ್ಯಾಯಮೂರ್ತಿ ಶ್ರೀ ಶಹಾ

ಇವರ ತೀರ್ಮಾನ (ತಾ. ೧೩-೯-೫೨)

ಜೈನ ಸಮಾಜದವತಿಯಿಂದ ಶ್ರೀ ರತಿಲಾಲ ಪನಚಂದಗಾಂಧಿ ಮತ್ತು ಮುಂಬಯಿಪಾರ್ಸಿಪಂಚಾಯತಿಯು ಜಿಮ್ಮೆದಾರರು ಮಾಡಿದ ಎರಡು ಅರ್ಜಿಗಳಲ್ಲಿ ಮುಖ್ಯ ತಕರಾರುಗಳೆಂದರೆ "ಸಾರ್ವಜನಿಕ ಜಿಮ್ಮೆ ಕಾಯದೆಯು ಧಾರ್ಮಿಕ ವರ್ಗಗಳ ಮೇಲೆ ಬೇಕಾಬಿಟ್ಟಿ ಶೀರ ರೀತಿಯಿಂದ ನಿರ್ಬಂಧನೆಯನ್ನು ಹಾಕಿದ್ದಾಗಿದೆ. ಆದರಿಂದ ಭಾರತ ಶಾಸನವು ಕೊಟ್ಟ ಧಾರ್ಮಿಕ ಹಕ್ಕುಗಳು ನಷ್ಟವಾಗಿರುತ್ತವೆ. ಧರ್ಮಾರ್ಥ ಸಂಸ್ಥೆಗಳಿಂದ ವಸೂಲ ಮಾಡತಕ್ಕ ರುಸುಮು ತೆರಿಗೆಯ ಸ್ವರೂಪದಲ್ಲಿದ್ದು ರಾಜ್ಯ ಶಾಸನ ಸಭೆಗೆ ಈ ಅಧಿಕಾರವಿರುವದಿಲ್ಲ. ಎಂದು ಮುಂತಾಗಿ ವಾದವಿದ್ದಿತು. ಈ ತಕರಾರುಗಳ ಮೇಲೆ ಮುಖ್ಯ ನ್ಯಾಯಮೂರ್ತಿಗಳು ಕೊಟ್ಟ ನಿರ್ಣಯ:—

**"ಭಾರತ ಶಾಸನವು ದಯಪಾಲಿಸಿದ ಧಾರ್ಮಿಕ ಸ್ವಾತಂತ್ರ್ಯವು ಅನಿರ್ಬಂಧವಾದದ್ದಲ್ಲ. ಯಾವದೇ ಧರ್ಮಕ್ಕೆ ಸಂಬಂಧಿಸಿದ ಭೌತಿಕಚಟುವಟಿಕೆಗಳಲ್ಲಿ ರಾಜ್ಯ ಸರಕಾರವು ಕೈಹಾಕಬಾರದೆಂಬ ಕಟ್ಟಳೆಯಿಲ್ಲ. ಧರ್ಮವೆಂದರೆ ಮಾನವನನ್ನು ದೇವರೊಡನೆ ಕಟ್ಟುವಂಥಾದ್ದು.**

ಭಾರತ ಶಾಸನವು ಧಾರ್ಮಿಕ ಸ್ವಾತಂತ್ರ್ಯವನ್ನು ಕೊಟ್ಟಾಗ್ಯೂ ಆಧರ್ಮಕ್ಕೆ ಸಂಬಂಧಿಸಿದ ಆರ್ಥಿಕ, ರಾಜಕೀಯ ಮುಂತಾದ ರಂಗಗಳಲ್ಲಿಯು ಚಟುವಟಿಕೆಗಳು ವ್ಯವಸ್ಥಿತ ರೀತಿಯಿಂದ ನಡೆಯುವಂತೆ ಕಾಯದೆಯನ್ನು ಮಾಡಲಿಕ್ಕೆ ರಾಜ್ಯ ಸರಕಾರಗಳಿಗೆ ಅಧಿಕಾರವುಂಟು. ಇದರಿಂದ ಧರ್ಮದ ಮೂಲಭೂತ ಹಕ್ಕುಗಳಲ್ಲಿ ಕೈಹಾಕಿದಂತಾಗುವದಿಲ್ಲ.

ಭಾರತವು ಸ್ವತಂತ್ರವಾಗುವ ಪೂರ್ವದಲ್ಲಿ ರಾಜ್ಯ ಸರಕಾರದ ಕರ್ತವ್ಯವು ಕೇವಲ ಕಾಯದೆ ಮತ್ತು ಸುವ್ಯವಸ್ಥೆಯನ್ನು ಕಾಯುವದಿತ್ತು ಆದರೆ ಈಗ ನಮ್ಮ ರಾಜ್ಯವು ಜನತಾ ಸುಖವರ್ಧಿನಿನಾಡು (Welfare-state) ಆಗಿದ್ದರಿಂದ ಮೊದಲಿಗಿಂತ ಅದರ ಕಾರ್ಯಕ್ಷೇತ್ರವು ಹೆಚ್ಚು ವ್ಯಾಪಕವಾದದ್ದಾಗಿದೆ'' ನ್ಯಾಯಮೂರ್ತಿ ಶಹಾರವರು ಸಹ ಇದೇ ಅಭಿಪ್ರಾಯವನ್ನು ಕೊಟ್ಟಿದ್ದು ಈ ಪ್ರಕಾರವಾಗಿ ಉಭಯ ನ್ಯಾಯಮೂರ್ತಿಗಳು ತೀರ್ಮಾನವನ್ನು ಕೊಟ್ಟು ಮೇಲೆ ಕಾಣಿಸಿದ ಎರಡೂ ಅರ್ಜಿಗಳನ್ನು ಕಿತ್ತುಹಾಕಿದರು.



# Bombay Public Trusts Act. 1950

## ( BOMBAY ACT. XXIX OF 1950 )

## ಮುಂಬಯಿ ಸಾರ್ವಜನಿಕ ಜಿಮ್ಮೆ ಕಾಯದೆ. ೧೯೫೦

### [ ಭಾಗ ೧ ]

ಮುಂಬಯಿ ರಾಜ್ಯದಲ್ಲಿ ಧಾರ್ಮಿಕ ಮತ್ತು ಧರ್ಮಾರ್ಥ ಆಸ್ತಿಗಳ ಬಗ್ಗೆ ಈ ಹಿಂದೆ ಇದ್ದ ಕಾನೂನುಗಳ ಪ್ರಯೋಗವು ಸಮಾಧಾನಕರವಾಗಿ ಜರಗದ್ದರಿಂದಲೂ ಸಾರ್ವಜನಿಕ ಜಿಮ್ಮೆ ಆಸ್ತಿಗಳ ಆಡಳಿತೆಯು ಸರಿಯಾದ ರೀತಿಯಿಂದ ನಡೆಯದ್ದರಿಂದಲೂ ಮತ್ತು ಜನತೆಯಲ್ಲಿ ಧಾರ್ಮಿಕ ಮತ್ತು ಧರ್ಮಾರ್ಥ ಆಸ್ತಿಗಳ ಧರ್ಮದರ್ಶಿಗಳ ಬಗ್ಗೆ ವಿಶ್ವಾಸವು ಕಡಿಮೆಯಾಗುತ್ತಿದ್ದದರಿಂದಲೂ, ಇಂಥ ವಿಶ್ವಸ್ಥ ಆಸ್ತಿಗಳ ವ್ಯವಸ್ಥೆಯು ಸರಿಯಾಗಿ ನಡೆಯಬೇಕೆಂಬ ಉದ್ದೇಶದಿಂದ ಮುಂಬಯಿ ಸಾರ್ವಜನಿಕ ಜಿಮ್ಮೆಗಳ ಕಾಯದೆಯು ಮುಂಬಯಿ ಶಾಸನ ಸಭೆಯಲ್ಲಿ ಪಾಸಾಗಿ ತಾ. ೩೧-೫-೧೯೫೦ ನೇ ದಿವಸ ಭಾರತ ಅಧ್ಯಕ್ಷರ ಒಪ್ಪಿಗೆಯನ್ನು ಪಡೆದದ್ದಾಗಿದೆ.

ಈ ಕಾಯದೆಯು ೧೯೫೦ ನೇ ಇಸ್ವಿಯ ೨೯ ನೇ ನಂಬರಿನ ಕಾಯದೆಯು ಇದ್ದು ೧೪-೮-೧೯೫೦ ನೇ ಮುಂಬಯಿ ಸರಕಾರಿ ಗ್ಯಾಜಿಟ್ಟಿನಲ್ಲಿ ಪ್ರಸಿದ್ಧಿಪಡಿಸಲ್ಪಟ್ಟಿದೆ.

ಈ ಕಾಯದೆಯು ಇಡೀ ಮುಂಬಯಿ ರಾಜ್ಯಕ್ಕೇನೇ ಅನ್ವಯಿಸುತ್ತಿದ್ದು ತಾ. ೨೧-೧-೧೯೫೨ ನೇ ದಿವಸ ಅಮಲಿನಲ್ಲಿ ಬಂದಿರುತ್ತದೆ. ಈ ತಾರೀಖಿನಿಂದ ಮುಂಬಯಿ ರಾಜ್ಯದಲ್ಲಿಯ ಸಾರ್ವಜನಿಕ ಜಿಮ್ಮೆ ಆಸ್ತಿಗಳಿಗೆ ಈ ಕಾಯದೆಯು ಅನ್ವಯಿಸುವದು. ಆದರೆ ಮುಂಬಯಿ ರಾಜ್ಯ ಸರಕಾರದವರು ಯಾವದಾದರೂ ಸಾರ್ವಜನಿಕ ಜಿಮ್ಮೆಕ್ಕೆ ಅಥವಾ ಸಾರ್ವಜನಿಕ ಜಿಮ್ಮೆಗಳ ವರ್ಗಕ್ಕೆ ಈ ಕಾಯದೆಯು ಅನ್ವಯಿಸುವದಿಲ್ಲವೆಂದು ಮುಂಬೈ ಸರಕಾರಿ ಗ್ಯಾಜಿಟ್ಟಿನಲ್ಲಿ ಪ್ರಸಿದ್ಧಮಾಡಬಹುದು.

## ಈ ಕಾಯದೆಯ ಉಗಮ

ಮುಂಬಯಿ ರಾಜ್ಯದಲ್ಲಿ ಸಾರ್ವಜನಿಕ ಹಿತಕ್ಕಾಗಿ ಕೊಟ್ಟ ವಿಶ್ವಸ್ಥ ಆಸ್ತಿಗಳ ಮತ್ತು ಧಾರ್ಮಿಕ ಉಂಬಳಿಗಳ ಆಡಳಿತೆಯು ಹೇಗೆ ನಡೆಯುತ್ತ ದೆಂಬುದನ್ನು ಶೋಧಮಾಡುವ ಬಗ್ಗೆ ೧೯೪೮ ನೇ ಇಸ್ವಿ ಜಾನೆವರಿ ತಿಂಗಳಲ್ಲಿ ಮುಂಬೈ ವರಿಷ್ಠನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಎಸ್. ಆರ್. ತೆಂಡೂ ಲಕರ ಇವರ ಅಧ್ಯಕ್ಷತೆಯಲ್ಲಿ ೮ ಜನ ಸದಸ್ಯರ ಒಂದು ಕಮೀಟಿಯು ನಿರ್ಮಿತವಾ ಯಿತು. ಮುಂದೆ ಅದಕ್ಕೆ ತೆಂಡೂಲಕರ ಕಮೀಟಿಯೆಂದು ಕರೆಯಲ್ಪ ಟ್ಟದೆ. ಈ ಕಮೀಟಿಯವರು ಮುಖ್ಯ ಪಟ್ಟಣಗಳಲ್ಲಿ ಕೆಲವು ಪ್ರಮುಖ ಜನರ ಹೇಳಿಕೆಯನ್ನು ತೆಗೆದುಕೊಂಡು ಒಂದು ವರದಿಯನ್ನು ತಯಾರಿಸಿ ಮುಂಬಯಿ ಸರಕಾರಕ್ಕೆ ಒಪ್ಪಿಸಿದರು. ಈ ವರದಿಯ ಆಧಾರದ ಮೇಲಿಂದ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ಆಡಳಿತೆಯ ಬಗ್ಗೆ ಮಸೂದೆಯನ್ನು ತಯಾರಿಸಿ ಮುಂಬಯಿ ಶಾಸನ ಸಭೆಯಲ್ಲಿ ಮಂಡಿಸಲಾಯಿತು. ಕೆಲವು ತಿದ್ದುಪಡಿಗಳಿಂದ ಈ ಮಸೂದೆಯು ಮುಂಬಯಿ ಸಾರ್ವಜನಿಕ ಜಿಮ್ಮೆ ಕಾಯಿದೆಯೆಂದು ಪ್ರಸಿದ್ಧವಾಗಿ ಅಮಲಿನಲ್ಲಿ ಬಂದದ್ದಾಗಿದೆ.

## ಈ ಕಾಯದೆ ವ್ಯಾಪಕತೆ

ಸಾರ್ವಜನಿಕ ಜಿಮ್ಮೆ ಕಾಯದೆಯಲ್ಲಿ ೧) ಧಾರ್ಮಿಕ ಮತ್ತು ೨) ಧರ್ಮಾರ್ಥ (ಲೌಕಿಕ) ಹೀಗೆ ಎರಡು ವಿಭಾಗಗಳನ್ನು ಮಾಡಬಹುದು.

೧) ಧಾರ್ಮಿಕ ವಿಭಾಗದಲ್ಲಿ :— ೧) ಮಠ ೨) ಮಂದಿರ ಮತ್ತು ೩) ವಾಕ್ಫ ಆಸ್ತಿಗಳು ಬರುತ್ತವೆ.

(೨) ಧರ್ಮಾರ್ಥ (ಲೌಕಿಕ) ವಿಭಾಗದಲ್ಲಿ ೯ ನೇ ಕಲ್ಮಿನ ಮೇರೆಗೆ.

ಅ) ಬಡತನ ಅಥವಾ ಸಂಕಟ ಪರಿಹಾರ.

ಬ) ಶಿಕ್ಷಣ.

ಕ) ಔಷಧೋಪಚಾರ.

ಡ) ಯಾವದೇ ಸಾಮಾನ್ಯ ಸಾರ್ವಜನಿಕ ಉಪಯೋಗದ ಉದ್ದೇಶಗಳ ಅಭಿವೃದ್ಧಿ ಮಾಡುವದು.

ಆದರೆ ಕೇವಲ ವಿಹಾರಗೇಳಿಗೆ ಸಂಬಂಧಪಟ್ಟ ಉದ್ದೇಶಗಳು ಅಥವಾ ಕೇವಲ ಧಾರ್ಮಿಕ ಶಿಕ್ಷಣ ಅಥವಾ ಪೂಜೆ, ಇವುಗಳಿಗೆ ಸಂಬಂಧಪಟ್ಟ ಉದ್ದೇಶಗಳು. ಈ ವ್ಯಾಖ್ಯೆಯಲ್ಲಿ ಅಡಕವಾಗುವದಿಲ್ಲ.

ಸಾರ್ವಜನಿಕ ಜಿಮ್ಮೆ ಸ್ವರೂಪ :— (a) ಯಾರ ಸಲುವಾಗಿ ಅಥವಾ ಯಾವ ಉದ್ದೇಶದ ಸಲುವಾಗಿ ಎಂಬುದು ಸ್ಪಷ್ಟವಾಗಿಲ್ಲದಿದ್ದರೂ ಸಾರ್ವಜನಿಕ ಜಿಮ್ಮೆದ ಸ್ವರೂಪವು ಬದಲಾಗಲಾರದು. ಉದಾ:— ಧರ್ಮ ಧರ್ಮಾದಾವ, ಪುಣ್ಯಕಾರ್ಯ, ಪುಣ್ಯದಾನ ಮುಂತಾದ ಉದ್ದೇಶಗಳಿಗಾಗಿ ಆಸ್ತಿಗಳನ್ನು ಕೊಟ್ಟಿದ್ದರೆ ಅವು ಸಹ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಾಗುತ್ತವೆ.

(b) ಕೆಲವು ಆಸ್ತಿಗಳು ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಗಳಿಗಾಗಿ, ಕೆಲವು ಹಾಗೆ ಇಲ್ಲದೆ ಇದ್ದವುಗಳು ಕೂಡಿ ಇದ್ದಾಗ್ಯೂ ಸಹ ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಳಿಗೆ ಸಂಬಂಧಪಟ್ಟ ವಿಶ್ವಸ್ಥ ಆಸ್ತಿ ಇರುವದಿಲ್ಲವೆಂಬ ಕಾರಣದ ಮೇಲೆ ಮಾತ್ರ ಅದು ಸಾರ್ವಜನಿಕ ವಿಶ್ವಸ್ಥ ಆಸ್ತಿಯಲ್ಲವೆಂದು ತಿಳಿಯತಕ್ಕದ್ದಲ್ಲ.

(c) ಯಾವನಾದರೊಬ್ಬ ಮನುಷ್ಯನ ಹೆಸರಿನಿಂದ ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಳಿಗಾಗಿ ಆಸ್ತಿಗಳನ್ನು ಬರಕೊಟ್ಟಿದ್ದು ಅಂಥ ಆಸ್ತಿಗಳ ವಿನಿಯೋಗದ ಬಗ್ಗೆ ಯಾವ ಹೊಣೆಗಾರಿಕೆಯನ್ನು ಹೇರಿಲ್ಲವೆಂಬ ಕಾರಣದ ಮೇಲಿಂದ ಸಾರ್ವಜನಿಕ ಜಿಮ್ಮೆಯಾಗುವದಿಲ್ಲವೆಂದು ತಿಳಿಯತಕ್ಕದ್ದಲ್ಲ.

(d) ಯಾವದಾದರೂ ಧಾರ್ಮಿಕ ಅಥವಾ ಧರ್ಮಾರ್ಥ ರೀತಿಯ ಉದ್ದೇಶಗಳಿಗಾಗಿ ಅಥವಾ ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಳಿಗಾಗಿ ಸ್ಥಾಪಿಸಲ್ಪಟ್ಟ ಸಂಘ ಸಂಸ್ಥೆಗಳಿಗಾಗಲಿ ಕೊಟ್ಟ ವಿಶ್ವಸ್ಥ ಆಸ್ತಿಗಳು ಅಂಥ ಉದ್ದೇಶಗಳನ್ನು ಸಾಧಿಸುವದು ಅಸಂಭವ ಅಥವಾ ಅವ್ಯವಹಾರ್ಯವೆಂಬ ಕಾರಣದ ಮೇಲಿಂದ ಅಥವಾ (೨) ಅಂಥ ಸಂಘ, ಸಂಸ್ಥೆಗಳು ಅಸ್ತಿತ್ವದಲ್ಲಿ ಉಳಿದಿಲ್ಲವೆಂಬ ಕಾರಣಗಳ ಮೇಲಿಂದ ಸಾರ್ವಜನಿಕ

ಜಿಮ್ಮೆದಾರ್ಯಾಗುವದಿಲ್ಲವೆಂದು ತಿಳಿಯತಕ್ಕದ್ದಲ್ಲ. [ಈ ಬಗ್ಗೆ ಸಾರ್ವಜನಿಕ ಟ್ರಸ್ಟ ಕಾಯದೆಯ ೯, ೧೦, ೧೧, ೧೨, ೧೩ ಕಲಮುಗಳನ್ನು ಪರಿಶೀಲಿಸಬಹುದು.]

## ಧಾರ್ಮಿಕ ವಿಭಾಗ

## ಮಠ

ಈ ಕಾಯದೆಯ ೨ ನೇ ಕಲಮ್ಮ ೯ ನೇ ಕ್ಲಾಜಿನಲ್ಲಿ ಮಠದ ವ್ಯಾಖ್ಯೆಯನ್ನು ಕೊಡಲಾಗಿದೆ. ಈ ವ್ಯಾಖ್ಯೆಯ ಮೇರೆಗೆ ಮಠವೆಂದರೆ ಹಿಂದೂ ಧರ್ಮದ ಪ್ರಗತಿಗಾಗಿ ನಿರ್ಮಿಸಲ್ಪಟ್ಟ ಒಂದು ಸಂಸ್ಥೆಯಾಗಿದ್ದು, ಶಿಷ್ಯವೃಂದಕ್ಕೆ ಆಧ್ಯಾತ್ಮಿಕ ಬೋಧೆಯನ್ನಾಗಲಿ ಅಥವಾ ಧಾರ್ಮಿಕ ಸಂಸ್ಕಾರವನ್ನಾಗಲಿ ಕೊಡುವದೇ ಕರ್ತವ್ಯವಾಗಿದ್ದು ಅಥವಾ ಅಂಥ ಶಿಷ್ಯ ಸಮುದಾಯದ ಮೇಲೆ ತನ್ನ ಪ್ರಭುತ್ವವನ್ನು ನಡೆಸುವ ಯಾವನಾದರೊಬ್ಬನು ಅಂಥ ಸಂಸ್ಥೆಗೆ ಅಧಿಪತಿಯಾಗಿರಬೇಕು.

ಈ ಸಂಸ್ಥೆಗೆ ಸಂಬಂಧಪಟ್ಟ ಧಾರ್ಮಿಕ ಪೂಜಾ ಅಥವಾ ಸಂಸ್ಕಾರ ಸ್ಥಾನಗಳೂ ಸಹ ಮಠದ ವ್ಯಾಖ್ಯೆಯಲ್ಲಿ ಸಮಾವೇಶವಾಗುತ್ತವೆ.

ಮಠದ ಈ ವ್ಯಾಖ್ಯೆಯನ್ನು ೧೯೨೭ ನೇ ಇಸ್ವಿಯ ಮದ್ರಾಸ ಹಿಂದು ರಿಲಿಜಸ್ ಎಂಡೋಮೆಂಟ ಕಾಯದೆಯ ೯ ನೇ ಕಲಮಿನಲ್ಲಿ ವರ್ಣಿಸಿದ ಮಠದ ವ್ಯಾಖ್ಯೆಯನ್ನೇ ಸ್ವಲ್ಪ ಬದಲಾವಣೆ ಮಾಡಿ ಇಲ್ಲಿ ಅನುಸರಿಸಿದ್ದಾಗಿದೆ.

**ಮಠದ ಉತ್ಪತ್ತಿ:**— ಮೊಟ್ಟಮೊದಲು ಹಿಂದೂಜನರ ಸಂಸ್ಕೃತಿಯು ತಾತ್ವಿಕ ವಿಚಾರ, ಮತ್ತು ವಿಶ್ವಬಂಧುತ್ವ ಮುಂತಾದ ಅಮೋಘ ತತ್ವಗಳ ಮೇಲೆ ಕಟ್ಟಲ್ಪಟ್ಟಿದ್ದು ಆದರಿಂದ ನಿಜವಾದ ಸುಖಜೀವನದ ಸೊಬಗನ್ನು ಅನುಭೋಗಿಸುತ್ತಿದ್ದರು. ಇದರಿಂದ ಅವರು ಸಂತುಷ್ಟರಾಗದೆ ಸತ್ಯಶೋಧನೆಯನ್ನು ನಡಿಸಿದರು. ಲೌಕಿಕ ಸುಖ ಸೌಕರ್ಯ ಸಾಧನೆಗಳಿಗಿಂತ ಮಿಗಿಲಾದದ್ದು ಆತ್ಮ ಸಂಶೋಧನೆಯೆಂಬುದನ್ನು ಮನಗಂಡು

ಅದರ ಸಿದ್ಧಿಗಾಗಿ ವಿಶೇಷ ಸಾಹಸವು ನಡೆಯಿತು. ಅತಿ ಪ್ರಾಚೀನ ಹಿಂದು ಸಂಸ್ಕೃತಿಯನ್ನು ನಾವು ವೇದಗಳಲ್ಲಿ ಕಾಣುತ್ತೇವೆ. ವೇದ ಕಾಲದಲ್ಲಿ ನಿಸರ್ಗದೇವತೆಯ ಆರಾಧನೆ ವಿಶೇಷವಾಗಿದ್ದಿತು. ವೇದಗಳಲ್ಲಿ ಮತ್ತು ಪ್ರಾಚೀನ ಸ್ಮೃತಿಗಳಲ್ಲಿ ಮಂದಿರ ಸ್ಥಾಪನೆಯ ಬಗ್ಗೆ ಏನೂ ಕಂಡುಬರುವದಿಲ್ಲ. ಮನುವಿನ ಕಾಲದಲ್ಲಿ (ಕ್ರಿ. ಶಕ ಪೂರ್ವದಲ್ಲಿ ಸುಮಾರು ೩೦೦ ವರ್ಷಗಳ ಹಿಂದೆ) ಬ್ರಹ್ಮಚಾರಿ ಸನ್ಯಾಸಿಗಳು ಧರ್ಮೋಪದೇಶಕರಾಗಿದ್ದರು. ಅವರು ತಮ್ಮ ಶಿಷ್ಯರಿಗೆ ಉಪದೇಶವನ್ನು ಮಾಡುತ್ತಿದ್ದರು. ಆ ಮೇರೆಗೆ ಪರಂಪರೆಯಾಗಿ ನಡೆಯುತ್ತಿದ್ದಿತು. ಆ ಕಾಲಕ್ಕೆ ಪೂಜಾಸ್ಥಾನಗಳೂ ಇದ್ದಿರಲಿಲ್ಲ ಮತ್ತು ಆರಾಧನಾ ಮೂರ್ತಿಗಳೂ ಇದ್ದಿರಲಿಲ್ಲ.

ಮಂದಿರ ಸ್ಥಾಪನೆಯು ಪುರಾಣಕಾಲದಲ್ಲಿ ನಡೆಯಿತೆಂದು ಹೇಳಬಹುದು, ಶ್ರೀ ಭಗವಾನ್ ಬುದ್ಧನ ಭೋದ ಪ್ರಭಾವದಿಂದ ಭರತಖಂಡದಲ್ಲಿ ಮೊದಲಿಗೆ ಪೂಜಾಸ್ಥಾನಗಳು ಸ್ಥಾಪಿಸಲ್ಪಟ್ಟವು. ಇದರಿಂದ ಶ್ರೀ ಬುದ್ಧನ ಪ್ರಭಾವವು ಹೆಚ್ಚಾಗಿ ಆತನ ಅನುಯಾಯಿಗಳ ಸಂಖೆಯು ದಿನೇ ದಿನೇ ಬೆಳೆಯಲಿಕ್ಕೆ ಹತ್ತಿತು. ಬುದ್ಧನ ಪ್ರಭಾವ ಪ್ರವಾಹವನ್ನು ತಡೆಯುವದಕ್ಕೋಸುಗ ಶಿವಮಂದಿರಗಳು ಸ್ಥಾಪಿಸಲ್ಪಟ್ಟವು.

ಆಮೇಲೆ ಶ್ರೀ ಶಂಕರಾಚಾರ್ಯರ ಅವತಾರವಾಯಿತು. ಸನ್ಯಾಸಿಗಳು ಇರತಕ್ಕ ಅನೇಕ ಮಠಗಳನ್ನು ಇವರು ಸ್ಥಾಪಿಸಿದರೆಂದು ಮತ್ತು ಅಂಥ ಮಠಗಳಲ್ಲಿ ಬ್ರಹ್ಮಚಾರಿಗಳು ಇರುತ್ತಿದ್ದು ಧರ್ಮೋಪದೇಶ ನಡೆಯುತ್ತಿತ್ತೆಂದು ಆಧಾರಗಳು ದೊರೆಯುತ್ತವೆ. ಆದರೆ ಶ್ರೀ ಶಂಕರಾಚಾರ್ಯರ ಪೂರ್ವದಲ್ಲಿ ಶಿವಯೋಗಿಗಳು ಮಠಗಳನ್ನು ಸ್ಥಾಪಿಸಿ ಅಲ್ಲಿ ವಾಸವಾಗಿರುತ್ತಿದ್ದರೆಂದು ಪ್ರಾಚೀನ ಗ್ರಂಥವಾದ ಸೂತ ಸಂಹಿತೆಯಲ್ಲಿ ಉಲ್ಲೇಖಿಸಿದ್ದಾಗಿದೆ. ಪ್ರಾಚೀನ ಗ್ರಂಥಗಳಾದ ಶಿವರಹಸ್ಯ, ಶಿವಧರ್ಮ ಸಂಹಿತ, ಪಾರಮೇಶ್ವರಾಗಮ ಮೊದಲಾದ ಗ್ರಂಥಗಳಲ್ಲಿಯೂ ಸಹ ಈ ಮಠಗಳ ಬಗ್ಗೆ ವರ್ಣನೆ ಅದೆ. ಹೀಗೆ ಮೊಟ್ಟಮೊದಲು ಶೈವರಲ್ಲಿ ಮತ್ತು ವೀರಶೈವರಲ್ಲಿ ಮಠಗಳು ಸ್ಥಾಪಿಸಲ್ಪಟ್ಟವೆಂದು ಊಹಿಸಲಿಕ್ಕೆ ಅನೇಕ ಆಧಾರಗಳು ದೊರೆಯುತ್ತವೆ. ಈ ಬಗ್ಗೆ ಶ್ರೀ ಪಂಡಿತ ಸಿ. ಎಮ್. ವೀರಭದ್ರ ಶರ್ಮಾ

(ಲಿಂಗೈಕ್ಯ ಕಾಶಿಜ್ಞಾನ ಸಿಂಹಾಸನಾಧೀಶ ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯರು) ಇವರು ತಮ್ಮ ಶಿವಧರ್ಮ ಗ್ರಂಥಮಾಲೆಯ ೭ನೇ ಗ್ರಂಥವಾದ "ಮಠಗಳು ಮತ್ತು ಮಂದಿರಗಳು" ಎಂಬ ಚಿಕ್ಕ ಗ್ರಂಥದಲ್ಲಿ ಬರೆದಿದ್ದಾರೆ.

ಮಂದಿರಸ್ಥಾಪನೆಯ ಕಾಲದ ನಂತರ ಮಠ ಸ್ಥಾಪನೆಯಾಯಿತೆಂದು ತಿಳಿಯುತ್ತದೆ. ಮಂದಿರ ಮತ್ತು ಮಠಗಳ ಸ್ಥಾಪನೆಯಾದಾಗ್ಗೆ ಪುರಾಣ ಪ್ರವಚನಗಳ ಪರಿಣಾಮವು ಆ ಕಾಲದ ಜನರ ಮನಸ್ಸಿನಮೇಲೆ ವಿಶೇಷವಾಗಿದ್ದದರಿಂದ ಮಂದಿರಗಳಲ್ಲಿದ್ದ ಮೂರ್ತಿಯ ಪೂಜಾವಿನಿಯೋಗಕ್ಕಾಗಿ ಮತ್ತು ಮಠದಲ್ಲಿದ್ದ ಸನ್ಯಾಸಿ, ಧರ್ಮೋಪದೇಶಕರಿಗೆ ಅನೇಕ ದಾನ ಧರ್ಮಗಳು ಮಾಡಲ್ಪಟ್ಟವು. ಅಂದಿನಿಂದ ಮಂದಿರದ ಅರ್ಚಕರು ಮತ್ತು ಮಠದ ಧರ್ಮೋಪದೇಶಕರು ಈ ವರೆಗೆ ಧಾರ್ಮಿಕ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದು ದಾನದ ಆಸ್ತಿಗಳ ವಹಿವಾಟ ಉಪಭೋಗ ಮಾಡುತ್ತಾ ಬಂದಿರುತ್ತಾರೆ.

**ಮಠದ ಉದ್ದೇಶ:—** ಧರ್ಮಜ್ಞಾನ ಪ್ರಸಾರಣೆಗಾಗಿ ಮಠದ ಅನುಯಾಯಿಗಳಿಗೆ ಅಥವಾ ಶಿಷ್ಯರಿಗೆ ಆಧ್ಯಾತ್ಮ ಬೋಧೆ ಮಾಡುವದಕ್ಕಾಗಿ ಮತ್ತು ಆಯಾ ಪಂಥದ ಸಿದ್ಧಾಂತ ತತ್ವಗಳನ್ನು ಬಲಪಡಿಸುವದಕ್ಕಾಗಿ ಮತ್ತು ಸ್ಥಿರಗೊಳಿಸುವದಕ್ಕಾಗಿ ಮಠಗಳು ಅಸ್ತಿತ್ವದಲ್ಲಿರುತ್ತವೆ. ಈ ಧರ್ಮ ಸಂಸ್ಥೆಗಳು ಸಾಮಾನ್ಯ ಜನತೆಯಮೇಲೆ ತಮ್ಮ ಪ್ರಭೆಯನ್ನು ವಿಶೇಷವಾಗಿ ಬೀರಿದ್ದಲ್ಲದೆ ಧಾರ್ಮಿಕ ಮತ್ತು ಸಾಂಸ್ಕೃತಿಕ ವಿದ್ಯಾಕೇಂದ್ರ ಸ್ಥಾನಗಳೂ ಆಗಿರುತ್ತವೆ. (ಮದ್ರಾಸ ಹಾಯಕೋರ್ಟ ತೀರ್ಮಾನ ೨೭ ಮದ್ರಾಸ ೪೩೫ (೪೩೬) ನೇ ಪಾನುಗಳ ಮೇಲೆ ಮಠದ ವಿಷಯವು ಚರ್ಚಿಸಲ್ಪಟ್ಟಿದೆ.)

ಯಾವದೇ ಸಂಸ್ಥೆಯು ಮಠವೆಂದು ನಿರ್ಣಯಿಸಲ್ಪಡಬೇಕಾದರೆ, ಅದು ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಳಲ್ಲಿ ನಿರತವಾಗಿದೆಯೆಂದು ಆಧಾರ ಸಹಿತವಾಗಿ ಸ್ಥಿರಪಡಿಸಿದ ಹೊರತು ಅದು ಧಾರ್ಮಿಕ ಅಥವಾ ಧರ್ಮಾರ್ಥ ಸಂಸ್ಥೆಯಾಗಲಾರದು. ಮತ್ತು ಅದರ ಆಸ್ತಿಗಳು ಧಾರ್ಮಿಕ ಅಥವಾ ಧರ್ಮಾರ್ಥ ಉಂಬಳಿಯಾಗಲಾರವು. (ನಾಗಪೂರ

ಹಾಯಕೋರ್ಟತೀರ್ಮಾನ ೧೯೩೫ ಎ. ಆಯ್. ಆರ್. ನಾಗಪೂರ ೧೧೪)
ಮಠಗಳು ಸಾಮಾನ್ಯವಾಗಿ ಸಾರ್ವಜನಿಕ ಧಾರ್ಮಿಕ ಉಂಬಳಿಯಾಗಿದ್ದರೂ,
ಎಷ್ಟೋ ಮಠಗಳು ಖಾಸಗಿ ಆಸ್ತಿಗಳಾಗಿರುತ್ತವೆ. (೧೪ ಮದ್ರಾಸ ೧ನೇ
ಪಾನಿನಮೇಲೆ ಮದ್ರಾಸ ಹಾಯಕೋರ್ಟಿನ ನ್ಯಾಯಮೂರ್ತಿಗಳು ನಿರ್ಣ
ಯ ಕೊಟ್ಟಿರುತ್ತಾರೆ.)

**ಮಠ ಮತ್ತು ಮಂದಿರಗಳ ತಾರತಮ್ಯ:—** ಈ ಎರಡೂ ಸಂಸ್ಥೆ
ಗಳು ಆಧ್ಯಾತ್ಮಿಕ ಸಾಧನೆಯ ಸೋಪಾನಗಳಾಗಿದ್ದು (೧) ಮಂದಿರವು;
ಧ್ಯಾನ, ಧಾರಣ, ಪೂಜಾದಿಗಳಿಗೆ ಅನುಕೂಲತೆಯನ್ನು ಕಲ್ಪಿಸಿಕೊಡುವ
ದಾಗಿಯೂ (೨) ಮಠವು ಆಧ್ಯಾತ್ಮಿಕ ಬೋಧೆ, ಮತ್ತು ಧರ್ಮ ಜ್ಞಾನ
ಮುಂತಾದವುಗಳನ್ನು ಸಂಪಾದಿಸುವ ಸ್ಥಾನವಾಗಿಯೂ ಇರುತ್ತವೆ.

ಮಂದಿರದಲ್ಲಿ ಮೂರ್ತಿಯು ಅಧಿದೇವತೆಯಾಗಿದ್ದಂತೆ ಮಠದಲ್ಲಿ
ಪವಿತ್ರಚರಿತರಾದ ಮತ್ತು ಜ್ಞಾನಸಂಪನ್ನರಾದ ಯತಿಗಳು ಮಠಾಧಿಕಾರಿ
ಗಳಾಗಿ ಇರುತ್ತಾರೆ.

ಮಠಾಧಿಪತಿಗಳ ಸ್ಥಾನವು ಮಂದಿರದ ಧರ್ಮದರ್ಶಿಗಳ ಅಥವಾ
ಅರ್ಚಕರ ಸ್ಥಾನಕ್ಕಿಂತ ಭಿನ್ನವಾದದ್ದು ಇರುತ್ತದೆ. ಮಠಾಧಿಪತಿಯಾದ
ಮಹಂತನನ್ನು ಕ್ರಿಶ್ಚಿಯನ್ ಪದ್ಧತಿ ಮೇರೆಗೆ ಬಿಶಪ್ ಮತ್ತು ಆರ್ಚಬಿಶಪ್
ಇವರಿಗೆ ಕೆಲವು ರೀತಿಯಲ್ಲಿ ಹೋಲಿಸಲಿಕ್ಕೆ ಅಡ್ಡಿ ಇಲ್ಲ.

ಮಂದಿರಕ್ಕೆ ಕೊಟ್ಟ ಆಸ್ತಿಯ ಉತ್ಪನ್ನವನ್ನು ಮಂದಿರದ ಧರ್ಮದ
ರ್ಶಿಯು ಮಂದಿರದ ನಿರ್ದಿಷ್ಟ ಉದ್ದೇಶಗಳ ಸಲುವಾಗಿ ವಿನಿಯೋಗಮಾ
ಡುವದಿರುತ್ತದೆ. ಮಠಕ್ಕೆ ದಾನವಾಗಿ ಕೊಟ್ಟ ಆಸ್ತಿಯ ಉತ್ಪನ್ನವನ್ನು
ಮಠದ ಮಹಂತರು ತಮ್ಮ ಇಚ್ಛೆಯ ಮೇರೆಗೆ ಧರ್ಮಾರ್ಥ ಮತ್ತು ಧರ್ಮ
ಕಾರ್ಯಗಳಿಗಾಗಿ ವಿನಿಯೋಗ ಮಾಡುವದಿರುತ್ತದೆ. ಕಾಯದೇ ದೃಷ್ಟಿ
ಯಿಂದ ಮಠದ ಆಸ್ತಿಗಳ ಮೇಲೆ ಜೀವಮಾನದ ಹಕ್ಕು ಮಹಂತರಿಗೆ
ಇದ್ದಾಗ್ಯೂ ಅವುಗಳಿಂದ ಬಂದ ಉತ್ಪನ್ನದ ಮೇಲೆ ಸರ್ವಾಧಿಕಾರದ ಹಕ್ಕು
ಇರುತ್ತದೆ. ಆದರೆ ಸಂಸ್ಥೆಯನ್ನು ಅಬಾಧಿತವಾಗಿ ಕಾಪಾಡುವ ಹೊಣೆಗಾರಿ

ಕೆಯು ಮಹಾಂತರ ಮೇಲೆ ಇದೆ. [ಮದ್ರಾಸ ಹಾಯಕೋರ್ಟ ಠರಾವು ೨೭ ಮದ್ರಾಸ ೪೩೫ (೪೫೪) ] ಮಠಾಧಿಪತಿಯಾದ ಮಹಾಂತರಿಗೆ ಪಾದ ಕಾಣಿಕೆ ಗುರುಪೂಜಾ ಕಾಣಿಕೆ ಮುಂತಾದ ಕಾಣಿಕೆ ಹಣವನ್ನು ಶಿಷ್ಯರು ಕೊಡುವದುಂಟು ಅದು ಮಹಾಂತರ ಸ್ವಂತ ಆಸ್ತಿಯಾಗಿರಬೇಕೆಂದು ಊಹಿಸಲಾಗಿದೆ. (ಮದ್ರಾಸ ಹಿಂದು ರಿಲಿಜಸ್ ಎಂಡೋಮೆಂಟ ಕಾಯದೆ ರಚಿಸುವ ಪೂರ್ವದಲ್ಲಿ ಸಿಲೆಕ್ಟ ಕಮೀಟಿ ನೇಮಿಸಿದ ಕಾಲಕ್ಕೆ ಅದರ ಸದಸ್ಯರಾದ ಶ್ರೀ ರಾಮಚಂದ್ರರಾಯರು ಕೊಟ್ಟ ಅಭಿಪ್ರಾಯ.) ಮಠಾಧಿಪತಿಗಳಿಗೆ ಪಾದಕಾಣಿಕೆ ರೂಪದಿಂದ ಕೊಟ್ಟ ಸ್ಥಾವರ ಜಂಗಮ ಆಸ್ತಿಯಾಗಲಿ, ನಿರ್ದಿಷ್ಟ ಜಿಮ್ಮೆ ಆಸ್ತಿಯೆಂದು ಅಂಕಿತ ಹಾಕದೆ ಹಾಗೆ ಮಠಾಧಿಪತಿಗೆ ದಾನವಾಗಿ ಕೊಟ್ಟ ಆಸ್ತಿಯಾಗಲಿ ಮತ್ತು ಅಂಥ ಆಸ್ತಿಯಿಂದ ಬಂದ ಉತ್ಪನ್ನವಾಗಲಿ ಮಠದ ಧಾರ್ಮಿಕ ಉಂಬಳಿ ಆಸ್ತಿಯಾಗಲಾರದು. (ಭಾರತದ ಪಾರ್ಲಿಮೆಂಟಿನಲ್ಲಿ ೧೯೫೦ನೇ ಸಾಲಿನ ಡಿಸೆಂಬರ ತಿಂಗಳಲ್ಲಿ ಮಂಡಿಸಿದ ಬಿಲ್. ನಂ. ೭೮/೧೯೫೦)

ಮಂದಿರ ಮತ್ತು ಮಠಗಳಲ್ಲಿ ಮಹತ್ವದ ಭೇದವಿದೆ. ಧಾರ್ಮಿಕ ಉಂಬಳಿ ಮಸೂದೆ ಮಠಗಳಿಗೆ ಅನ್ವಯಿಸಬಾರದು. ಮಠಾಧಿಪತಿಗಳು ಮತ್ತು ಮಂದಿರದ ಧರ್ಮದರ್ಶಿಗಳು ಇವರ ನಡುವೆ ತಾರತಮ್ಯವಿದೆ ಮಠಾಧಿಪತಿಗಳಿಗೆ ಧರ್ಮದರ್ಶಿಗಿಂತ ತಮ್ಮ ಮಠದ ಆಸ್ತಿ ಮತ್ತು ಉತ್ಪನ್ನದ ಮೇಲೆ ಹೆಚ್ಚು ಹಕ್ಕು ಇದೆ. ಆದ್ದರಿಂದ ಹಿಂದೂಧಾರ್ಮಿಕ ಉಂಬಳಿ ಮಸೂದೆಯನ್ನು ಮಠಗಳಿಗೆ ಅನ್ವಯಿಸಬಾರದೆಂದು ಮುಂತಾಗಿ ಸುದೀರ್ಘವಾದ ಮನವಿಯೊಂದನ್ನು ಶ್ರೀ ಟಿ. ಆರ್. ವೆಂಕಟರಾವ ಶಾಸ್ತ್ರಿ ಮೊದಲಾದವರು ಮದ್ರಾಸದ ಮುಖ್ಯ ಮಂತ್ರಿಗಳಿಗೆ ಸಮರ್ಪಿಸಿದ್ದು ಅದು ಹುಬ್ಬಳಿ ಸಂಯುಕ್ತ ಕರ್ನಾಟಕ ಪತ್ರಿಕೆಯ ತಾ. ೨೬-೧-೧೯೪೯ನೇ ದಿವ್ಸದ ಸಂಚಿಕೆಯಲ್ಲಿ ಪ್ರಸಿದ್ಧವಾಗಿದೆಯಷ್ಟೆ.

ಯಾವದಾದರೊಂದು ಮಠವು ಸಾರ್ವಜನಿಕ ಧಾರ್ಮಿಕ ಆಸ್ತಿಯೊಂದು ನಿರ್ಧರಿಸಲ್ಪಡಿಸಿದ ವಿನಾ ಈ ಕಾಯದೆ (ಅಂದರೆ ೧೯೨೭ನೇ ಮದ್ರಾಸ ಹಿಂದು ರಿಲಿಜಸ್ ಎಂಡೋಮೆಂಟದ) ಕಕ್ಷೆಯಲ್ಲಿ ಬರಲಾರದು. (ಮದ್ರಾಸ ಹಾಯಕೋರ್ಟ ಠರಾವು ಎ. ಆಯ್. ಆರ್. ೧೯೩೮ ಮದ್ರಾಸ

೮೧೦) ಮಂದಿರಗಳಲ್ಲಿ ಮೂರ್ತಿಯು ಶಾಸನ ಮಾನ್ಯ (Juridical) ಪುರುಷನಿದ್ದಂತೆ ಮಠಗಳಲ್ಲಿ ಗುರುಸ್ಥಾನವು (Office of Spiritual teacher) ಶಾಸನ ಮಾನ್ಯ ಪುರುಷನಂತಿವೆ. ಮಂದಿರದಲ್ಲಿಯ ಮೂರ್ತಿಯ ಹೆಸರಿನಿಂದ ಎಷ್ಟೋ ದಾನ ಶಾಸನಗಳನ್ನು ಬರೆದಿಡುವಂತೆ ಮಠದಲ್ಲಿಯ ಗುರುಸ್ಥಾನ ಅಥವಾ ಅಧಿಕಾರಸ್ಥಾನದ ಹೆಸರಿನಿಂದ ದಾನಶಾಸನಗಳನ್ನು ಬರೆದಿಡುವದುಂಟು. ಹೀಗೆ ಬರೆದು ಕೊಟ್ಟ ಆಸ್ತಿಗಳು ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಾಗುತ್ತವೆ.

ಮಂದಿರಗಳಲ್ಲಿರತಕ್ಕ ಮೂರ್ತಿಗೆ ಯಾವ ರೀತಿಯಿಂದ ದೈವಿಕ ಶಕ್ತಿಯನ್ನು ಆಹ್ವಾನಿಸಿ ಅದರಲ್ಲಿ ಭಕ್ತಿಯನ್ನಿಟ್ಟು ಜನರು ಪೂಜಿಸುತ್ತಾರೆಯೋ ಹಾಗೆಯೇ ಮಠಗಳಲ್ಲಿರತಕ್ಕ ಗುರುಸ್ಥಾನದಲ್ಲಿ ಭಕ್ತಿಯನ್ನಿಟ್ಟು ಶಿಷ್ಯರು ನಡಕೊಳ್ಳುತ್ತಾರೆ. ಮಂದಿರದಲ್ಲಿರತಕ್ಕ ಮೂರ್ತಿ ಮತ್ತು ಮಠದಲ್ಲಿರತಕ್ಕ ಗುರುಸ್ಥಾನದ ಮೇಲೆ ಕುಳಿತ ಗುರುವು ಒಂದೇ ಭಾವನೆಯಿಂದ ತಿಳಿಯಲ್ಪಡುತ್ತಾರೆ. ಆದ್ದರಿಂದ ಮಂದಿರದಲ್ಲಿಯ ಮೂರ್ತಿ ಪೂಜೆಮಾಡುವ ಅರ್ಚಕನಾಗಲಿ ಅಥವಾ ಮಂದಿರದ ಧರ್ಮದರ್ಶಿಯಾಗಲಿ ಮಠಾಧಿಪತಿಯಾದ ಗುರು ಅಥವಾ ಮಹಾಂತರಿಗೆ ಸಮಾನನಾಗಲಾರನು. ಮೂರ್ತಿಯು ನಿರ್ಜೀವ ವಸ್ತುವಿದ್ದು ಅದಕ್ಕೆ ಕೊಟ್ಟ ಕಾಣಿಕೆಗಳು ಕಾಯಿದೆ ದೃಷ್ಟಿಯಲ್ಲಿ ಭಿನ್ನವಾದವುಗಳು ಅವೆ. ಗುರುವಿಗೆ ವೈಯಕ್ತಿಕ ವೈಶಿಷ್ಟ್ಯಕ್ಕಾಗಿ ಕೊಟ್ಟಕಾಣಿಕೆಯು ಗುರುವಿನ ಸ್ವಂತ ಆಸ್ತಿಯಾಗುವದೆಂದು ತಿಳಿಯಲಾಗಿದೆ.

ಅಂಥ ಸ್ವಂತಆಸ್ತಿಯನ್ನು ಗುರುವು ತನ್ನ ಇಚ್ಛೆಯಮೇರೆಗೆ ಉಪಭೋಗಮಾಡಬಹುದು. ಆದರೆ ಮಂದಿರದಲ್ಲಿಯ ಮೂರ್ತಿಗೆ ಕೊಟ್ಟ ಆಸ್ತಿಯು ಮೂರ್ತಿ ಪೂಜಕರ ಸ್ವಂತ ಆಸ್ತಿಯಾಗಲಾರದು. ಮಂದಿರದಲ್ಲಿಯ ಮೂರ್ತಿಯು ಸಾರ್ವಜನಿಕರ ಸ್ವತ್ತು ಇದ್ದದ್ದರಿಂದ ಅದಕ್ಕೆ ಕೊಟ್ಟ ಸ್ಥಾವರ ಜಂಗಮ ಆಸ್ತಿಗಳು ಸಾರ್ವಜನಿಕ ಆಸ್ತಿಯಾಗಿಯೇ ಉಳಿಯುತ್ತವೆ. ಸಾರ್ವಜನಿಕ ಆಸ್ತಿಯನ್ನು ಅರ್ಚಕನು ಅಥವಾ ಧರ್ಮದರ್ಶಿಯು ಜವಾಬ್ದಾರನಾತೆಯಿಂದ ಕಾಯ್ದಿಡುತ್ತಾನೆ. ಇಂಥ ಆಸ್ತಿಯನ್ನು ಪರಾಧೀನ ಮಾಡಲಿಕ್ಕೆ ಅರ್ಚಕನಿಗೆ ಹಕ್ಕು ಇರುವದಿಲ್ಲ.

**ವೀರಶೈವರ ಮಠಗಳು:—** ವೀರಶೈವರಲ್ಲಿ ಮಠಗಳ ತಾರತಮ್ಯ ವಿದ್ದಷ್ಟು ಬೇರೆ ಮತೀಯರಲ್ಲಿ ಇದ್ದಂತೆ ತೋರುವದಿಲ್ಲ.




ವೀರಶೈವರು ವಿಶೇಷವಾಗಿ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಲ್ಲಿ ವಾಸವಾಗಿದ್ದು ಎಷ್ಟೋ ಪಟ್ಟಣ ಮತ್ತು ಹಳ್ಳಿಗಳಲ್ಲಿ ಸಾವಿರಾರು ಮಠಗಳುಂಟು. ವೀರಶೈವ ವಸತಿಯಿದ್ದ ಸಣ್ಣ ಹಳ್ಳಿಯಲ್ಲಿಯೂ ಸಹ ಒಂದು ಮಠವು ಇದ್ದೇ ಇರುತ್ತದೆ. ಯಾಕಂದರೆ ಈ ಧರ್ಮದಲ್ಲಿ ಗುರು, ಮತ್ತು ಭಕ್ತರ ಹೆಣಿಕೆಯು ವಿಲಕ್ಷಣವಾಗಿದ್ದು ಮಠದ ಮಹತ್ವವು ವಿಶೇಷವಾಗಿರುತ್ತದೆ. ಇಂಥ ಮಠಗಳಲ್ಲಿ ಗುರುಸ್ಥಲಮಠ, ವಿರಕ್ತ ಮಠ ಮತ್ತು ದೇಶಿಕ ಮಠ ಹೀಗೆ ಮೂರು ಸಾಮಾನ್ಯ ವಿಭಾಗಗಳನ್ನು ಮಾಡಬಹುದು. ಗುರುಸ್ಥಲಮಠಗಳಲ್ಲಿ ಪುತ್ರವರ್ಗ ಮತ್ತು ಶಿಷ್ಯವರ್ಗ ಹೀಗೆ ಎರಡು ಪ್ರಕಾರದ ಮಠಗಳಿರುತ್ತವೆ. ಪುತ್ರವರ್ಗ ಮಠಗಳಲ್ಲಿ

ಖಾಸಗಿ ಮಠಗಳು ಇಂಥ ಮಠಗಳಲ್ಲಿ ಬಹುಕಾಲದಿಂದ ಗೃಹಸ್ಥಾಶ್ರಮಿಗಳು ಇರುತ್ತಿದ್ದು ತಮ್ಮ ಮಠದ ಪರಂಪರೆಯ ಲೌಕಿಕ ಧರ್ಮಕಾರ್ಯಗಳನ್ನು ಅಂದರೆ ದೀಕ್ಷಾ ಮಾಡುವದು, ಲಿಂಗಧಾರಣವಮಾಡುವದು, ವಿವಾಹಮಾಡುವದು ಅಂತ್ಯಕ್ರೀಯೆಗಳನ್ನು ಮಾಡುವದು ಇರುತ್ತದೆ. ಇಂಥ ಕೆಲವು ಮಠಗಳಿಗೆ ಬ್ರಿಟಿಶ ಮತ್ತು ಪೇಶವಾಯಿ ಕಾಲದಲ್ಲಿ ಸನದುಗಳನ್ನು ಕೊಟ್ಟಿದ್ದು, ಆ ಕಾಲಕ್ಕಿದ್ದ ಮಠದ ಒಡೆಯರ ಹೆಸರಿಲೆ ಇರುತ್ತವೆ. ಈ ಸನದುಗಳಲ್ಲಿ ವಿಶೇಷತಃ ಗ್ರಾಮಚಾಕರಿ ರೈತೋಪಯೋಗಿ ಕಾರ್ಯಕ್ಕಾಗಿ ಜಮೀನುಗಳನ್ನು ಕೊಟ್ಟಿದ್ದು ಅದೆ. ಈ ಪ್ರಕಾರವಾಗಿದ್ದ ಎಲ್ಲ ಪುತ್ರವರ್ಗ ಮಠಗಳು ಖಾಸಗಿ ಆಸ್ತಿ ಇದ್ದ ಪುತ್ರವರ್ಗ ಮಠಗಳು ಸಾರ್ವಜನಿಕ ವಿಶ್ವಸ್ಥ ಕಾಯದೇ ಕಕ್ಷೆಯಲ್ಲಿ ಬರುವದಿಲ್ಲ.

ಶಿಷ್ಯವರ್ಗ ಮಠಗಳಲ್ಲಿ ಖಾಸಗಿ ಮತ್ತು ಸಾರ್ವಜನಿಕ ಹೀಗೆ ಎರಡು ಪ್ರಕಾರದ ಮಠಗಳು ಅವೆ. ಯಾವದಾದರೊಂದು ಶಿಷ್ಯವರ್ಗಮಠದಲ್ಲಿ ಆ ಮಠದ ಸ್ವಾಮಿಯ ಹೆಸರಿನಿಂದ ಅವರ ಪೂಜಾವಿನಿಯೋಗಕ್ಕಾಗಿ ಜಮೀನುಗಳನ್ನು ಕೊಟ್ಟಿದ್ದಾಗಿದ್ದರೆ ಅಥವಾ ಹಿಂದೆ ಸರಕಾರಕ್ಕೆ ಸಹಾಯ ಅಥವಾ ಸೇವೆ ಸಲ್ಲಿಸಿದ್ದಕ್ಕೆ ಇನಾವು ಕೊಟ್ಟಿದ್ದರೆ ಅಂಥ ಆಸ್ತಿಗಳು ಸಾರ್ವಜನಿಕ ಜಿಮ್ಮೆ ಆಸ್ತಿಗಳಾಗುವದಿಲ್ಲ.

ಯಾವದಾದರೊಂದು ಮಠದ ಹೆಸರಿನಿಂದ ಜಮೀನುಗಳು ಇನಾಮಾಗಿ ಕೊಡಲ್ಪಟ್ಟಿದ್ದರೆ ಮತ್ತು ಮಠದ ಸ್ವಾಮಿಗಳು ವಹಿವಾಟದಾರನಾತೆಯಿಂದ ಅಂಥ ಜಮೀನುಗಳನ್ನು ಉಪಭೋಗ ಮಾಡುತ್ತಿದ್ದರೆ ಅವು ಸಾರ್ವಜನಿಕ ಜಿಮ್ಮೆ ಆಸ್ತಿಗಳಾಗುತ್ತವೆ.

ಕೇವಲ ಮಠವೆಂದಾಕ್ಷಣಕ್ಕೆ ಆ ಮಠವು ಸಾರ್ವಜನಿಕ ಜಿಮ್ಮೆ ಕಕ್ಷೆಯಲ್ಲಿ ಬರುತ್ತದೆಂದು ತಿಳಿಯತಕ್ಕದ್ದಲ್ಲ. ಆ ಮಠಕ್ಕೆ ಇದ್ದ ಆಸ್ತಿಗಳ ಸ್ವರೂಪ ಮತ್ತು ಅಂಥ ಆಸ್ತಿಗಳನ್ನು ಕೊಟ್ಟ ಉದ್ದೇಶ ಮತ್ತು ಆ ಮಠದಲ್ಲಿ ನಡೆಯತಕ್ಕ ಕಾರ್ಯಗಳ ವಿವರ ಮುಂತಾದವುಗಳನ್ನು ಪರ್ಯಾಲೋಚಿಸಿ ಅದು ಖಾಸಗಿ ವಿಶ್ವಸ್ಥ ಆಸ್ತಿಯೋ ಅಥವಾ ಸಾರ್ವಜನಿಕ ವಿಶ್ವಸ್ಥ ಆಸ್ತಿಯೋ ಎಂಬುದನ್ನು ನಿರ್ಣಯಿಸತಕ್ಕದ್ದು.

ಕೆಲವು ಮಠಗಳಲ್ಲಿ ಧರ್ಮಶಿಕ್ಷಣ ಅಥವಾ ಧರ್ಮಪೂಜಾ ನಡೆಸುವ ಬಗ್ಗೆ ಆಸ್ತಿಗಳನ್ನು ಹಾಕಿಕೊಟ್ಟಿದ್ದಾರೆ. ಅದು ಧರ್ಮಾರ್ಥ ಉದ್ದೇಶ ಕಕ್ಷೆಯಲ್ಲಿ ಬರುವದಿಲ್ಲವೆಂದು ಈ ಕಾಯದೆಯ ೯ನೇ ಕಲ್ಮಿನಲ್ಲಿ ಹೇಳಿದೆ. ಉದಾ:— ಒಂದು ಮಠದ ಸ್ವಾಮಿಗಳ ವೈಯಕ್ತಿಕ ಹೆಸರಿನಿಂದ ಆ ಮಠದಲ್ಲಿ ಪಾಠ ಶಾಲೆಯನ್ನು ನಡಿಸುವ ಬಗ್ಗೆ ಜಮೀನುಗಳನ್ನು ದಾನವಾಗಿ ಕೊಟ್ಟಿರುತ್ತಾರೆಂದು ಕಲ್ಪಿಸೋಣ ಒಬ್ಬ ವ್ಯಕ್ತಿಯ ಹೆಸರಿನಿಂದ ಕೊಟ್ಟ ಆಸ್ತಿಯು ಖಾಸಗಿ ವಿಶ್ವಸ್ಥ ಆಗುತ್ತಿದ್ದು ಅದರ ಉದ್ದೇಶವು ಸಾರ್ವಜನಿಕ ಹಿತ ಅಥವಾ ಅಭಿವೃದ್ಧಿಯಿಲ್ಲದವಿನಾ ಸಾರ್ವಜನಿಕ ವಿಶ್ವಸ್ಥ ಆಸ್ತಿಯಾಗಲಾರದು. ಇಲ್ಲಿ ಪಾಠಶಾಲೆಯು ಎಂದರೆ ಧರ್ಮಶಿಕ್ಷಣವನ್ನು ಕೊಡತಕ್ಕ ಸಂಸ್ಥೆ. ಧರ್ಮ ಶಿಕ್ಷಣವು ಧರ್ಮಾರ್ಥ ಉದ್ದೇಶದಲ್ಲಿ ಬರುವದಿಲ್ಲವೆಂದು ಮೇಲೆ ಹೇಳಿದ್ದಾಗಿದೆ. ಮತ್ತು ಧಾರ್ಮಿಕ ಉದ್ದೇಶಗಳು ಯಾವವು ಎಂಬ ಬಗ್ಗೆ ಈ ಕಾಯದೆಯಲ್ಲಿ , ಎಲ್ಲಿಯೂ ಉಲ್ಲೇಖವಿರುವದಿಲ್ಲ. ಆದ್ದರಿಂದ ಯಾವನಾದರೊಬ್ಬ ವ್ಯಕ್ತಿಯ ಹೆಸರಿನಿಂದ ಪಾಠಶಾಲೆಯಬಗ್ಗೆ ಆಸ್ತಿಗಳನ್ನು ಕೊಟ್ಟಿದ್ದಾಗಿದ್ದರೆ ಅವು ಸಾರ್ವಜನಿಕ ಜಿಮ್ಮೆ ಕಕ್ಷೆಯಲ್ಲಿ ಬರುವದಿಲ್ಲವೆಂದು ನನ್ನ ಮತ.

**ವಿರಕ್ತ ಮಠ:—** ವಿರಕ್ತ ಮಠವು ಮುಂಬಯಿ ಸಾರ್ವಜನಿಕ ಜಿಮ್ಮೆ (ಟ್ರಸ್ಟ) ಕಾಯದೆ ಕ್ಷೇತ್ರದಲ್ಲಿ ಬರುವದೆಂದು ಹಲವರು ಅಭಿಪ್ರಾಯ ಪಡುತ್ತಾರೆ. ಈ ಕಾಯದೆಯಲ್ಲಿ ೨ನೇ ಕಲ್ಮಿನ ೯ನೇ ಕ್ಲಾಜಿನಲ್ಲಿ ಕೊಟ್ಟ ಮಠದ ವ್ಯಾಖ್ಯೆಯನ್ನು ಮೇಲೆ ವಿವರಿಸಿದ್ದಾಗಿದೆ. ಈ ಮಠದ ವ್ಯಾಖ್ಯೆಯನ್ನು ೨ನೇ ಕಲ್ಮಿನ ೧೩ನೇ ವ್ಯಾಖ್ಯೆಯಲ್ಲಿಯ "ಸಾರ್ವಜನಿಕ ಜಿಮ್ಮೆ" ವ್ಯಾಖ್ಯೆಯೊಡನೆ ಓದಿದರೆ ಎಂಥ ಮಠಗಳು ಈ ಕಾಯಿದೆ ಹಿಡಿತದಲ್ಲಿ ಬರುವವೆಂದು ತಿಳಿಯುತ್ತದೆ. ಮಠ ಮತ್ತು ಮಠಕ್ಕೆ ಸಂಬಂಧಪಟ್ಟ ಆಸ್ತಿಗಳು ಇದ್ದು ಅವು ಸಾರ್ವಜನಿಕ ಧಾರ್ಮಿಕ ಕಾರ್ಯಗಳಿಗಾಗಿ ಅಥವಾ ಧರ್ಮಾರ್ಥ ಕಾರ್ಯಗಳಿಗಾಗಿ ವಿನಿಯೋಗಿಸಲ್ಪಡುತ್ತಿದ್ದರೆ ಅಂಥ ಮಠಗಳಿಗೆ ಈ ಕಾಯದೆಯು ಅನ್ವಯಿಸುತ್ತದೆ. ಹೀಗೆ ನಾವು ಸಾರ್ವಜನಿಕ ಜಿಮ್ಮೆ ಕಾಯದೆಯನ್ನು ವಿಮರ್ಶಿಸಿದಾಗ್ಗೆ ಎಲ್ಲ ವಿರಕ್ತ ಮಠಗಳಿಗೆ ಈ ಕಾಯದೆಯು ಅನ್ವಯಿಸುತ್ತದೆಂದು ನಿರ್ದಿಷ್ಟವಾಗಿ ಹೇಳಲಿಕ್ಕಾಗುವದಿಲ್ಲ. ಉದಾ:— ಒಂದು ವಿರಕ್ತ ಮಠಕ್ಕೆ ಬ್ರಿಟಿಶರ ಆಳಿಕೆಯಲ್ಲಿ ೧) ನೀರಿನ

ಅರವಟ್ಟಿಗೆ ಇಡುವ ಬಗ್ಗೆ ಅಥವಾ ೨) ದಾಸೋಹ ನಡಿಸಲಿಕ್ಕೆ ಅಥವಾ ೩) ಶಿವಯೋಗಿಗಳ ಪೂಜಾ ವಿನಿಯೋಗಕ್ಕಾಗಿ ಹೀಗೆ ಬೇರೆ ಬೇರೆ ಪ್ರಕಾರವಾಗಿ ಸನದುಗಳು ಇದ್ದು ಅಂಥ ಮಠಕ್ಕೆ ಈ ಕಾಯದೆಯು ಅನ್ವಯಿಸುವದೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಮೊದಲಿನ ಎರಡು ಕರಾರುಗಳು ಆ ಮಠಕ್ಕೆ ಇದ್ದರೆ ಅದು ಸಾರ್ವಜನಿಕ ಜಿಮ್ಮೆ ಆಸ್ತಿಯು ಮಠವಾಗುತ್ತದೆ ಅದಕ್ಕೆ ಈ ಕಾಯದೆಯು ಹತ್ತುತ್ತದೆ ಮೂರನೇ ಕರಾರು ಅಂದರೆ ಶಿವಯೋಗಿಗಳ ಪೂಜಾ ವಿನಿಯೋಗಕ್ಕಾಗಿ ಎಂದು ಇದ್ದ ಮಠಕ್ಕೆ ಈ ಕಾಯದೆಯು ಅನ್ವಯಿಸುವದಿಲ್ಲ.

ಮಠದಲ್ಲಿ ವಿದ್ಯಾ ಪ್ರಸಾರಣೆ ಮಾಡಲಿಕ್ಕೆ ಮತ್ತು ವಿದ್ಯಾರ್ಥಿಗಳನ್ನು ಪೋಷಣೆಮಾಡಲಿಕ್ಕೆ ಗ್ರಾಮದಲ್ಲಿಯ ಬೇರೆ ಬೇರೆ ವ್ಯಾಪಾರಸ್ಥರು ತಮ್ಮ ವ್ಯವಹಾರದಲ್ಲಿ ಗಿರಾಕಿಗಳ ಕಡೆಯಿಂದ ಎತ್ತಿದ ಧರ್ಮಾದಾವನ್ನು ಮಠದ ಅಧಿಕಾರಿಗಳು ವಸೂಲ ಮಾಡುವದುಂಟು. ಈ ಪ್ರಕಾರವಾಗಿ ವಸೂಲ ಮಾಡಿದ ಹಣವು ಮಠದಲ್ಲಿ ನಡೆಯತಕ್ಕ ಪಾಠಶಾಲೆ ಮತ್ತು ಇತರ ಧಾರ್ಮಿಕ ಅಥವಾ ಲೌಕಿಕ ವಿದ್ಯಾಪ್ರಸಾರಕ್ಕಾಗಿ ಇರುತ್ತದೆ. ಇಂಥ ಪ್ರಸಂಗಗಳಲ್ಲಿ ಮಠವು ಸಾರ್ವಜನಿಕ ಜಿಮ್ಮೆ ಕಾಯಿದೆ ಕ್ಷೇತ್ರದಲ್ಲಿ ಬರುತ್ತದೆ. ಒಟ್ಟಿನಲ್ಲಿ ಹೇಳುವದೆಂದರೆ ವಿರಕ್ತಮಠವೆಂದಾಕ್ಷಣವೇ ಕೇವಲ ಈಗಿನ ೧೯೫೦ನೇ ಸಾಲಿನ ಸಾರ್ವಜನಿಕ ಜಿಮ್ಮೆ ಕಾಯಿದೆ ಕ್ಷೇತ್ರದಲ್ಲಿ ಬಂದು ಅದರ ಆಡಳಿತೆಗೆ ಒಳಗಾಗುತ್ತದೆಂದು ತಿಳಿಯುವದು ಸಮಂಜಸವಲ್ಲ. ಕೆಲವು ವಿರಕ್ತಮಠಗಳು ಒಂದೊಂದು ಕುಟುಂಬದ ಮುಖ್ಯಸ್ಥನಿಂದ ಸ್ಥಾಪಿಸಲ್ಪಟ್ಟಿದ್ದು ಅವುಗಳಿಗೆ ಖಾಸಗಿ ಆಸ್ತಿಗಳು ಕೊಡಲ್ಪಟ್ಟಿವೆ. ಅದ್ದರಿಂದ ಪ್ರತ್ಯೇಕ ವಿರಕ್ತಮಠದ ಸ್ಥಿತಿ, ಅದರ ಸೊತ್ತಿನ ವಿಧಾನ, ದಾನದ ಸ್ವರೂಪ, ಸನದು ಶಾಸನಗಳ ಕರಾರು ಮುಂತಾದವುಗಳನ್ನು ಪೂರ್ಣ ನೋಡಿಕೊಂಡು ನಿರ್ಣಯ ತೆಗೆದುಕೊಳ್ಳುವದು ಹೆಚ್ಚು ವಿಹಿತ.

ದೇಶಿಕ ಮಠಗಳು ಅಲ್ಲಲ್ಲಿ ವಿರಳವಾಗಿರೋಣದರಿಂದ ಅಂಥ ಮಠಗಳಲ್ಲಿರತಕ್ಕವರು ಕೇವಲ ಬ್ರಹ್ಮಚಾರಿಯಾಗಿ ಶಿವಪೂಜಾನುಷ್ಠಾನವನ್ನು ಮಾಡುತ್ತಿರುತ್ತಾರೆ. ಅಂಥ ಮಠಗಳಿಗೆ ಸಾರ್ವಜನಿಕ ಧರ್ಮಾರ್ಥ

ಕಾರ್ಯಗಳನ್ನು ಕೈಕೊಳ್ಳಲಿಕ್ಕೆ ಮತ್ತು ನಡಿಸಲಿಕ್ಕ ಜಮೀನುಗಳನ್ನು ಹಾಕಿ ಕೊಟ್ಟಿರುತ್ತಾರೆ. ಅಂಥ ಸನದುಗಳಲ್ಲಿದ್ದ ಕರಾರುಗಳ ಮೇಲೆ ಆ ಮಠದ ಸ್ಥಿತಿಯನ್ನು ನಿರ್ಣಯಿಸಲಿಕ್ಕೆ ಬರುತ್ತದೆ. ಕೆಲವು ಮಠಗಳಲ್ಲಿ ವ್ಯಕ್ತಿಯ ಹೆಸರಿನಿ[illegible]ವುಚಾಕರಿ ರೈತೋಪಯೋಗಿ ಸನದುಗಳು ಇರೋಣವರಿಂದ ಅಂಥ ಮಠಗಳಿಗೆ ಈ ಕಾಯದೆಯು ಅನ್ವಯಿಸುವದಿಲ್ಲ.

೧) ಪ್ರ ಮಠ:— "ಅ" ಎಂಬ ಮಠದ ಹೆಸರಿನ ಒಂದು ಕುಟುಂಬವು ಇರುತ್ತದೆ. ಈ ಕುಟುಂಬದಲ್ಲಿ "ಬ" ಎಂಬ ಕುಟುಂಬದ ಮುಖ್ಯಸ್ಥನು ಇರುತ್ತಾನೆ. ಆತನಿಗೆ 'ಕ' ಎಂಬ ಹೆಂಡತಿಯೂ 'ಡ' ಎಂಬ ಮಗನು ಇರುತ್ತಾನೆ. "ಬ"ನು ತನ್ನ ಊರಲ್ಲಿ ಧರ್ಮದ ಕಾರ್ಯಗಳನ್ನು ಮಾಡಿ ಅವುಗಳ ಬಗ್ಗೆ ರುಸುಮು ಅಥವಾ ಆದಾಯುವನ್ನು ಹೊಂದುತ್ತಾನೆ ಹೀಗಿದ್ದರೆ ಅಂಥ ಮಠವು ಈ ಕಾಯದೆಯಲ್ಲಿ ಬರುತ್ತದೆಯೋ?

ಉ— ಇಲ್ಲ, ಯಾಕಂದರೆ ಸಾರ್ವಜನಿಕ ಜವಾಬ್ದಾರಿ ಕಾಯದೆಯ ೩ನೇ ಕಲಮು ೯ನೇ ಕ್ಲಾಜು ಆದಕ್ಕೆ ಹತ್ತುವದಿಲ್ಲ.

೨) ಪ್ರ—೧ನೇ ಪ್ರಶ್ನೆಯಲ್ಲಿದ್ದ ಕುಟುಂಬಕ್ಕೆ ಯಾವದಾದರು ಸ್ಥಾವರ ಆಸ್ತಿ ಇದ್ದರೆ ಹೇಗೆ?

ಉ— ಆದು ಖಾಸಗಿ ಆಸ್ತಿ ಆಗುತ್ತದೆ. ಆದ್ದರಿಂದ ಈ ಕಾಯದೆ ಹತ್ತುವದಿಲ್ಲ.

೩) ಪ್ರ— ೧ನೇ ಪ್ರಶ್ನೆಯಲ್ಲಿದ್ದ ಮಠದ ಮಾಲಿಕನಾದ 'ಬ' ಈತನು ಜಂಗಮನಿದ್ದು ಆತನು ಇರತಕ್ಕ ಗ್ರಾಮದಲ್ಲಿ ಗ್ರಾಮಸೇವೆಗಾಗಿ ಬ್ರಿಟಿಶ ಸರಕಾರದವರು ಇನಾಮು ಜಮೀನುಗಳನ್ನು ಹಾಕಿಕೊಟ್ಟಿರುತ್ತಾರೆ. ಈ ಇನಾಮು ಜಮೀನುಗಳ ಬಗ್ಗೆ ಸನದು 'ಬ'ನ ಹಿಂದಿನ ಪೂರ್ವಜರಿಗೆ ಕೊಟ್ಟಿರುತ್ತಾರೆ. ಸದ್ರಿ ಇನಾಮು ಜಮೀನುಗಳ ಬಾಬತು 'ಬ'ನು ಮತ್ತು ಆತನ ಪೂರ್ವಜರು ಜೂಡಿಕೊಡುತ್ತಾಬಂದಿರುತ್ತಾರೆ. ಸದ್ರಿ ಜಮೀನುಗಳನ್ನು 'ಬ'ನು ಮತ್ತು ಆತನ ಕುಟುಂಬದವರು ಉಪಭೋಗ ಮಾಡುತ್ತಾರೆ. ಊರೊಳಗೆ ಹವ್ಯಕವ್ಯಗಳನ್ನು ಮಾಡುತ್ತಾರೆ ಹೀಗಿದ್ದಗೆ ಅಂಥ ಮಠವು ಈ ಕಾಯದೆಯಲ್ಲಿ ಬರುತ್ತದೆಯೋ?

ಉ— ಇಲ್ಲ. ಯಾಕಂದರೆ ಮೊಟ್ಟಮೊದಲು ಅಂಥ ಮಠವು ಸಾರ್ವ ಜನಿಕ ಮಠವಲ್ಲ ಆ ಮಠದ ಅಧಿಕಾರಿಯಾದ 'ಬ' ಈತನು ಮಠದ ಇನಾಮು ಜಮೀನುಗಳನ್ನು ಉಪಭೋಗಿಸುತ್ತಾ ತನ್ನ ಗ್ರಾಮದ ಹಕ್ಕ ಕವ್ಯ ಕೆಲ್ಸ ಮಾಡುತ್ತಾನೆ. ಈ ಕೆಲ್ಸ ಮಾಡುವ ಬಗ್ಗೆ ಇನಾಮು ಜಮೀ ನುಗಳನ್ನು ಕೊಟ್ಟಿದ್ದು ಇರುತ್ತದೆ. ಆದ್ದರಿಂದ 'ಬ'ನ ಗ್ರಾಮ ಸೇವೆಗೆ ಫಲರೂಪವಾಗಿ ಇನಾಂ ಜಮೀನು ಕೊಟ್ಟಿದ್ದು ಅದೆ. ಒಂದು ವೇಳೆ 'ಬ'ನು ಗ್ರಾಮಸೇವೆ ಮಾಡದಿದ್ದರೂ ಸರಕಾರದವರಿಗೆ ಕಾಯದೆಯಿಂದ ಸದ್ರಿ ಜಮೀನನ್ನು ಬಿಡಿಸಲಿಕ್ಕೆ ಬರುವದಿಲ್ಲ ಆದರೆ ಭರ ಆಕಾರ ಹಣವನ್ನು 'ಬ'ನಿಂದ ವಸೂಲಮಾಡಬಹುದು. ಆದ್ದರಿಂದ ಅಂಥ ಆಸ್ತಿಯು ಸಾರ್ವ ಜನಿಕ ಜಿಮ್ಮೆ ಆಗಲಾರದು.

ಪ್ರ— ಜಂಗಮರ ಕೆಲಸಕ್ಕಾಗಿ ಇನಾಮು ಜಮೀನು ಕೊಟ್ಟಿದ್ದರೆ ಅದನ್ನು ಪರಾಧೀನ ಮಾಡಲಿಕ್ಕೆ ಬರುತ್ತದೆಯೋ;

ಉ— ಅಂಥ ಜಮೀನನ್ನು 'ಬ'ನು ಪರಾಧೀನ ಮಾಡಿದ್ದರೆ ಮತ್ತು ಅದು ಜಾತ ಇನಾಮು ಇದ್ದರೆ ಪರಾಧೀನ ಮಾಡಿದ್ದು ಆತನ ಮೇಲೆ ಮತ್ತು ಅವನ ವಾರಸದಾರರ ಮೇಲೆ ಬಾಂದಾಯಿಸುತ್ತದೆ. ಮತ್ತು ಅದರ ಮೇಲೆ ಭರ ಆಕಾರ ಬೀಳುತ್ತದೆ.

೫) ಪ್ರ— ಗ್ರಾಮಸೇವೆಗಾಗಿ ಖಾಜಿ, ಜೋಶಿ, ಜಂಗಮ ಮತ್ತು ಮುಲ್ಲಾ ಇವರಿಗೆ ಹಿಂದೆ ಬ್ರಿಟಿಶ ಸರಕಾರದವರು ಇನಾಮು ಜಮೀನುಗ ಳನ್ನು ಹಾಕಿಕೊಟ್ಟಿರುತ್ತಾರೆ. ಇಂಥ ಜಮೀನುಗಳ ತಾರತಮ್ಯವೇನು?

ಉ— ಇಂಥ ಜಮೀನು ವಂಶ ಪರಂಪರ ಮಾಡುತ್ತಾ ಬಂದ ಕಾಯಕ (ಕಸಬು) ಇದರ ಬಗ್ಗೆ ರುಸುಮಿನ ರೂಪದಲ್ಲಿ ಹಾಕಿಕೊಟ ಇನಾಮು ಇರುವದರಿಂದ ಅವು ವೈಯಕ್ತಿಕ ಇನಾಮುಗಳಾಗಿರದೆ ನಿರಂತರ ವಾಗಿ ಆವರ ಮನೆತನಕ್ಕೆ ನಡೆಯುವ ಇನಾಮುಗಳಾಗಿರುತ್ತವೆ. ಈ ಕಾಯ ದೆ ತತ್ವವನ್ನು "ಪಟದಯ್ಯ ವಿರುದ್ಧ ಸ್ಟೇಟ ಸೆಕ್ರೆಟರಿ"(೨೫ ಬಂಬಾಯಿ ಲಾ ರಿಪೋರ್ಟರ ೧೧೬೦) ಈ ವ್ಯಾಜ್ಯದಲ್ಲಿ ಸ್ಪಷ್ಟೀಕರಿಸಿದ್ದಾಗಿದೆ. ಇಂಥ ಇನಾಮು ಜಮೀನುಗಳು ವೈಯಕ್ತಿಕ ಸೇವೆಗಾಗಿ ಕೊಡಲ್ಪಟ್ಟವು ಇರುವದ

ರಿಂದ ಧಾರ್ಮಿಕ ಅಥವಾ ಧರ್ಮಾರ್ಥ ಸಾಕ್ಷಿಯವತಿಯಿಂದ ೧ನೇ ಪ್ರಶ್ನೆಯ ಲ್ಲಿಯ 'ಬ'ನು ಅಥವಾ ಖಾಜಿ, ಮುಲ್ಲಾ, ಜೋಶಿ ಇವರು ಇನಾಮು ಧಾರಣ ಮಾಡಿದ್ದಾರೆಂದು ಹೇಳಲಿಕ್ಕಾಗುವದಿಲ್ಲ. ೧೮೬೩ನೇ ಸಾಲಿನ ೨೦ನೇ ನಂಬರಿನ ಕಾಯದೆಯ ೮ನೇ ಕಲಮಿನ ೩ನೇ ಕ್ಲಾಜಿನಲ್ಲಿ ಅದು ಬರುವದಿಲ್ಲ. ಅಂಥ ಇನಾಮು ಜಮೀನುಗಳು ಸಾರ್ವಜನಿಕ ಜಿಮ್ಮೆ ಆಸ್ತಿಗಳಾಗಲಾರವು. ಆದ್ದರಿಂದ ಈ ಕಾಯದೆಯು ಅನ್ವಯಿಸುವದಿಲ್ಲ.

೬) ಪ್ರ— ಒಂದು ವಿರಕ್ತ ಮಠದಲ್ಲಿ 'ಬ' ಎಂಬ ಶಿವಯೋಗಿಗಳು ಇರುತ್ತಾರೆಂದು ಕಲ್ಪಿಸುವಾ ಅವರು ಧರ್ಮೋಪದೇಶಮಾಡುವದೇ ಮುಖ್ಯ ಕರ್ತವ್ಯವಾಗಿದೆ. ಅವರಿಗೆ ಧರ್ಮೋಪದೇಶ ಮಾಡುವ ಬಗ್ಗೆ ಕಾಣಿಕೆ ಯಾಗಿ ಹಣವನ್ನು ಕೊಡುತ್ತಾರೆ. ಅಂಥ ಹಣವು ಸಾರ್ವಜನಿಕ ಜಿಮ್ಮೆ ಯಾಗುವದೋ?

ಉ— ಇಲ್ಲ. ಅದು ಅವರ ವಿದ್ವತ್ತಿನ ಫಲವಾಗಿರುತ್ತದೆ.

೭) ಪ್ರ— 'ಬ' ಎಂಬ ಸ್ವಾಮಿಗಳು ಇರತಕ್ಕ ಮಠವು ಮತ್ತು ಮಠದ ಆಸ್ತಿಗಳು ಸಾರ್ವಜನಿಕ ಉಪಯೋಗಕ್ಕಾಗಿ ಕೊಡಲ್ಪಟ್ಟಿದ್ದರೆ ಅಂಥ ಆಸ್ತಿಗಳು ಸಾರ್ವಜನಿಕ ಜಿಮ್ಮೆ ಆಸ್ತಿಗಳು ಆಗುವವೋ?

ಉ— ಹೌದು ಅವು ಈ ಕಾಯದೆಯ ೨ನೇ ಕಲಮಿನ ೯ನೇ ಮತ್ತು ೧೩ನೇ ವ್ಯಾಖ್ಯೆಗಳಲ್ಲಿ ಬರುವವು.

೮) ಪ್ರ— 'ಬ' ಎಂಬ ಸ್ವಾಮಿಗಳಿಗೆ ಅವರ ಭಕ್ತರು ಮತ್ತು ಮಠಕ್ಕೆ ನಡಕೊಳ್ಳತಕ್ಕ ಬೇರೆಯವರು ಅಥವಾ ದರ್ಶನಾರ್ಥಿಗಳಾಗಿ ಬಂದಂಥವರು ಪಾದಕಾಣಿಕೆಯಾಗಿ ಕೆಲವು ಹಣವನ್ನು ಸಲ್ಲಿಸುತ್ತಾರೆ. ಅಂಥ ಹಣವು ಸಾರ್ವಜನಿಕ ಜಿಮ್ಮೆ ಯಾಗುವದೋ?

ಉ— 'ಬ' ಎಂಬ ಸ್ವಾಮಿಗಳು ಮಠದ ಪ್ರತಿನಿಧಿಗಳಾಗಿರುವವರಿಂದ ಅವರಿಗೆ ಪಾದಕಾಣಿಕೆಯಾಗಿ ಸಲ್ಲಿಸಿದ ಹಣವು ಮಠದ ಅಧಿಕಾರ ಸ್ಥಾನಕ್ಕೆ ಸಲ್ಲಿಸಿದಂತಾಗುತ್ತದೆ. ಇವಲ್ಲದೆ ವೈಯಕ್ತಿಕ ವಿಶಿಷ್ಟತೆಯಿಂದ ಜನರ ಮೇಲೆ ಪ್ರಭೆಯನ್ನು ಬೀರಿದ್ದರಿಂದ ಆ ಕಾರಣದಿಂದಲೂ ಅನೇಕರು ಕಾಣಿಕೆ

ಯನ್ನು ಕಲ್ಪಿಸುತ್ತಾರೆ. ಈ ವಿಷಯವು ಸಂದಿಗ್ಧವಾಗಿರೋಣದಿಂದ ರೀಯಾ ಸಂದರ್ಭಕ್ಕನುಸರಿಸಿ ಸಾರ್ವಜನಿಕ ಜಿಮ್ಮೆ ಅಥವಾ ಖಾಸಗಿ ಆಸ್ತಿ ಯೆಂದು ನಿರ್ಣಯಿಸಬಹುದು.

**ಬ್ರಾಹ್ಮಣರ ಮಠಗಳು:—** ಬ್ರಾಹ್ಮಣರ ಮಠಗಳಲ್ಲಿ ಸಾಮಾನ್ಯ ವಾಗಿ ಸ್ಮಾರ್ತ ಮಠಗಳು ಮತ್ತು ವೈಷ್ಣವ ಮಠಗಳು ಹೀಗೆ ಎರಡು ವರ್ಗ ಗಳನ್ನು ಮಾಡಬಹುದು. ಶೈವಮಠಗಳೊಳಗೆ ಮುಖ್ಯವಾದ ಮಠವು ಅದ್ವೈತ ತತ್ವವಿಶಾರದರಾದ ಶ್ರೀಮತ್ ಶಂಕರಾಚಾರ್ಯರಿಂದ ಈಗ ಸುಮಾರು ೨ಸಾವಿರ ವರ್ಷಗಳ ಸುಮಾರಕ್ಕೆ ಶ್ರಿಂಗೇರಿಯಲ್ಲಿ ಸ್ಥಾಪಿಸಲ್ಪ ಟ್ಟಿತು. ಮೈಸೂರ ಸಂಸ್ಥಾನದಲ್ಲಿ ಈ ಮಠವು ಒಳ್ಳೇ ಪ್ರಸಿದ್ಧಿಯನ್ನು ಪಡೆ ದಿದ್ದು ರಾಜಮರ್ಯಾದೆಯಿಂದ ಈ ವರೆಗೆ ಜನಾದರಣೆಗೆ ಪಾತ್ರವಾಗಿದೆ. ಈ ಮಠವು ರಾಜಕಟಾಕ್ಷ ಕಕ್ಷೆಯಲ್ಲಿದ್ದದರಿಂದ ಹೆಚ್ಚಿನ ಸವಲತ್ತುಗಳು ಇದಕ್ಕೆ ದೊರೆತಿವೆ. ಶ್ರೀ ಶಂಕರಾಚಾರ್ಯರ ಮೂಲ ಮಠವು ಮೈಸೂರ ಸಂಸ್ಥಾನದಲ್ಲಿದ್ದರಿಂದ ಈ ಕಾಯದೆಯು ಅದಕ್ಕೆ ಅ ನ್ವ ಯಿ ಸು ವ ದಿ ಲ್ಲ. ಅವರ ಶಾಖಾಮಠಗಳು ಮುಂಬಯಿ ರಾಜ್ಯದಲ್ಲಿದ್ದು ಅವುಗಳಿಗೆ ದೊರೆತ ಸನದು ಮತ್ತು ಆಸ್ತಿಗಳು ದಾನರೂಪವಾಗಿ ಕೊಟ್ಟಿದ್ದರೆ ಅಂಥ ದಾನ ಶಾಸ ನಗಳ ಕರಾರು ಮುಂತಾದವುಗಳ ಮೇಲಿಂದ ಈ ಕಾಯದೆ ಕಟ್ಟಿನಲ್ಲಿ ಯಾವ ಸ್ಥಾನವನ್ನು ಪಡೆಯುತ್ತವೆಂಬುದನ್ನು ನಿರ್ಣಯಿಸತಕ್ಕದ್ದು. ಯಾವ ದಾದರೊಂದು ಮಠವು ಮುಂಬಯಿ ರಾಜ್ಯದಲ್ಲಿಯೇ ಇದ್ದು ಅದರ ಶಾಖಾ ಮಠಗಳು ಇದೇ ರಾಜ್ಯದಲ್ಲಿ ಬೇರೆ ಬೇರೆ ಕಡೆಗೆ ಇದ್ದರೆ ಮೂಲ ಮಠದ ಆಸ್ತಿ ಮತ್ತು ಅದಕ್ಕೆ ದೊರೆತ ಸನದು ಮತ್ತು ದಾನದರೀತಿ ಇವುಗಳ ಮೇಲಿಂದ ಅಂಥ ಮಠದ ಕಾಯದೆ ಸ್ವರೂಪವನ್ನು ತಿಳಕೊಳ್ಳಬಹುದು. ಮತ್ತು ಮೂಲಿ ಮಠವು ಸಾರ್ವಜನಿಕ ಮಠವೆಂದು ನಿರ್ಣಯಿಸಲ್ಪಟ್ಟರೆ ಅದಕ್ಕೆ ಅಧೀನವಾದ ಎಲ್ಲ ಮಠಗಳು ಸಾರ್ವಜನಿಕ ಸಂಸ್ಥೆಗಳೆಂದು ಗ್ರಹಿಸಬಹುದು.

ಶ್ರೀ ಮಧ್ವಾಚಾರ್ಯ[illegible]ದಾಯದ ಮಠಗಳು ಈಗ ಸುಮಾರು ೨೦೦ ವರ್ಷಗಳಿಂದಾಚೆಗೆ [illegible]ಸಲ್ಪಟ್ಟವೆಯೆಂದು ತಿಳಿಯುತ್ತದೆ. ಶ್ರೀ ಮಧ್ವಚಾರ್ಯರು ಉಡು[illegible]ಲ್ಲಿ ವಿಷ್ಣುಮೂರ್ತಿಯನ್ನು ಸ್ಥಾಪಿಸಿ

ವರು. ಈ ಮೂರ್ತಿಯು ಆರಾಧನೆಯನ್ನು ಮಾಡಲು ಶ್ರೀ ಮಧ್ವಾಚಾರ್ಯರ ಶಿಷ್ಯರು ಬೇರೆ ಬೇರೆ ಕಡೆಗೆ ಮಠಗಳನ್ನು ಸ್ಥಾಪಿಸಿದರು. ಅವು ಅಷ್ಟ ಮಠಗಳೆಂದು ಪ್ರಸಿದ್ಧವಿರುತ್ತವೆ.

ಶ್ರೀ ಮಧ್ವಾಚಾರ್ಯರ ಸಾಂಪ್ರದಾಯಕರಾದ ಶ್ರೀ ರಾಘವೇಂದ್ರ ಸ್ವಾಮಿಗಳು ಮಂತ್ರಾಲಯದಲ್ಲಿ ಮಠವನ್ನು ಸ್ಥಾಪಿಸಿದರು. ಅವರ ಶಿಷ್ಯ ಪರಂಪರೆಯು ಈ ವರೆಗೆ ನಡೆಯುತ್ತಾ ಬಂದಿರುತ್ತದೆ. ಹೀಗೆ ವೈಷ್ಣವ ಸಾಂಪ್ರದಾಯಕ ಮಠಗಳು ಬೇರೆ ಬೇರೆ ಕಡೆಗೆ ಸ್ಥಾಪಿಸಲ್ಪಟ್ಟಿರುತ್ತವೆ. ಮುಂಬಯಿ ರಾಜ್ಯದಲ್ಲಿ ಹೈದರಾಬಾದ ಸ್ಟೇಟಿನಲ್ಲಿ ಮತ್ತು ಬೇರೆ ಕಡೆಗೆ ಇಂಥ ಮಠಗಳು ಅಸ್ತಿತ್ವದಲ್ಲಿರುತ್ತವೆ. ಬ್ರಾಹ್ಮಣರ ಮಠಗಳು ವೀರಶೈವರ ಮಠಗಳಿಗಿಂತ ಭಿನ್ನವಾಗಿರುತ್ತವೆ. ವೈಷ್ಣವಸಾಂಪ್ರದಯದ ಉತ್ತರಾಧಿ ಮಠಾಧಿಕಾರಿಗಳು ವಿಷ್ಣೂಪಾಸಕರು ಇದ್ದು ವಿಷ್ಣುವಿಗ್ರಹವನ್ನು ಆರಾಧಿಸುತ್ತಾರೆ. ಈ ಮಠಗಳಿಗೆ ಮತ್ತು ಶಾಖಾಮಠಗಳಿಗೆ ದಾನರೂಪವಾಗಿ ಮತ್ತು ಸನದಿನಿಂದ ಆಸ್ತಿಗಳು ಬಂದಿರುತ್ತವೆ.

ಕೆಲವು ಸನದುಗಳಲ್ಲಿ ಧರ್ಮರಕ್ಷಣೆಗಾಗಿ ಎಂದು ಉಲ್ಲೇಖವಿರುತ್ತದೆಂದು ತಿಳಿಯುತ್ತದೆ. ಈ ಪ್ರಕಾರವಾಗಿ ಸಂದಿಗ್ಧರೀತಿಯಿಂದ ಸನದು ಕೊಡಲ್ಪಟ್ಟಾಗ್ಯೂ ಈ ಕಾಯದೆಯ ತತ್ವದ ಮೇರೆಗೆ ಅದು ಸಾರ್ವಜನಿಕ ಜಿಮ್ಮೆ ಆಗುತ್ತದೆಂದು ಕೆಲವರ ವಾದ ಈ ಬಗ್ಗೆ ಸನದುಗಳಲ್ಲಿದ್ದ ವಿವರಣೆ, ದಾನಶಾಸನಗಳ ಕರಾರು ಮುಂತಾದವುಗಳನ್ನು ಪೂರ್ಣವಿಮರ್ಶೆಮಾಡಿ ಅಂಥ ಆಸ್ತಿಗಳು ಸಾರ್ವಜನಿಕ ಜಿಮ್ಮೆ ಆಸ್ತಿಗಳು ಆಗಬಹುದೋ ಹೇಗೆ ಎಂಬುದನ್ನು ನಿರ್ಣಯಿಸುವದು ವಿಹಿತ.

ವೀರಶೈವ ಸಮಾಜದಲ್ಲಿ ಮಠ, ಗುರು (ಜಂಗಮ) ಮತ್ತು ಶಿಷ್ಯರ ನಡುವೆ ಇದ್ದ ಧಾರ್ಮಿಕ ಸಂಬಂಧದಂತೆ ಬ್ರಾಹ್ಮಣರಲ್ಲಿದ್ದಂತೆ ತೋರುವದಿಲ್ಲ. ವೀರಶೈವರಲ್ಲಿ ನಿತ್ಯ ನೈಮಿತ್ತಿಕ ಧರ್ಮಕಾರ್ಯಗಳನ್ನು ನಡಿಸಲಿಕ್ಕೆ ಜಂಗಮರು ಬೇಕಾಗಿದ್ದದರಿಂದ ಸ್ವತಂತ್ರರೀತಿಯಿಂದ ವೀರಶೈವರ ಧರ್ಮಕಾರ್ಯಗಳನ್ನು ಮಾಡಿ ಆ ಬಗ್ಗೆ ಅವರ ಕಡೆಯಿಂದ ಕಾಣಿಕೆಯನ್ನು ಪಡೆಯುತ್ತಾರೆ. ಹೀಗೆ ಖಾಸಗಿ ರೀತಿಯಿಂದ ಧರ್ಮಕಾರ್ಯಗಳನ್ನು ನಡೆಸಿ

ಹಾಗೂ ವೀರಶೈವರಲ್ಲಿ ಅವರಿಗೆ ಜಂಗಮರೆಂದು ಮತ್ತು ಜಂಗಮರು ಅಥವಾ ಗುರುಗಳು ಇರತಕ್ಕ ಸ್ಥಾನಕ್ಕೆ ಮಠವೆಂದು ಕರೆಯುವದುಂಟು. ಆದರೆ ಬ್ರಾಹ್ಮಣರಲ್ಲಿ ಧರ್ಮ ಕಾರ್ಯಗಳನ್ನು ಮಾಡತಕ್ಕವರು ಮತ್ತು ಅನ್ಯಜಾತಿಯವರ ಧರ್ಮಕಾರ್ಯಗಳನ್ನು ಮಾಡತಕ್ಕವರು ಆಚಾರ್ಯರು ಜೋಯಿಸರು ಮತ್ತು ಪುರೋಹಿತರು ಹೀಗೆ ಇರುತ್ತಾರೆ. ಇವರು ಕೇವಲ ಧರ್ಮಕಾರ್ಯಗಳನ್ನು ಶಾಸ್ತ್ರಬದ್ಧವಾಗಿ, ಪದ್ಧತಿ ಪ್ರಕಾರಮಾಡಿ ಅದರ ಪ್ರತಿಫಲವನ್ನು ಅಥವಾ ರುಸುಮನ್ನು ಪಡೆಯುತ್ತಾರೆ.

ಹಳ್ಳಿಯ ಸಂಘಟನೆಯಲ್ಲಿ ಧಾರ್ಮಿಕ ವಿಭಾಗವು ಒಂದು ಮಹತ್ವದ ಸ್ಥಾನವನ್ನು ಪಡೆದಿದ್ದರಿಂದ ಅದರ ರಕ್ಷಣೆಗಾಗಿ ಧಾರ್ಮಿಕ ಅಧಿಕಾರಿಗಳನ್ನು ನೇಮಿಸಿದ್ದುಂಟು. ಆ ಮೇರೆಗೆ ಬ್ರಿಟಿಶ ಸರಕಾರದ ಕಾಲದಲ್ಲಿ ಗ್ರಾಮ ಚಾಕರಿ ಸಲುವಾಗಿ ಎಂಬ ಕರಾರನ್ನು ಕಾಣಿಸಿ ಸ್ಥಾನಿಕ ಧಾರ್ಮಿಕ ಅಧಿಕಾರಿಗಳಿಗೆ ಅಂದರೆ ಖಾಜಿ, ಜೋಶಿ, ಜಂಗಮ, ಮುಲ್ಲಾ ಹೀಗೆ ಬೇರೆ ಬೇರೆ ಧರ್ಮದ ಅಧಿಕಾರಿಗಳಿಗೆ ಇನಾಮುಗಳನ್ನು ಸಹ ಹಾಕಿಕೊಟ್ಟಿರುತ್ತಾರೆ. ಆದ್ದರಿಂದ ಹಳ್ಳಿಯಲ್ಲಿ ಖಾಜಿ ಮೊದಲಾದ ಘಟಕಗಳು ಅವಶ್ಯವಾಗಿರಬೇಕೆಂಬ ಉದ್ದೇಶದಿಂದ ಈ ವ್ಯವಸ್ಥೆಯನ್ನು ಮಾಡಿದ್ದಾಗಿದೆ. ಹೀಗೆ ಜಂಗಮರು ವೀರಶೈವ ಸಮಾಜದಲ್ಲಿ ಅಥವಾ ಬೇರೆ ಸಮಾಜದಲ್ಲಿ ಧರ್ಮಕಾರ್ಯಗಳನ್ನು ಮತ್ತು ಬ್ರಾಹ್ಮಣರು ಧರ್ಮಕಾರ್ಯಗಳನ್ನು ಮತ್ತು ಮುಲ್ಲಾ.ಮತ್ತು ಖಾಜಿ ಜನರು ಧರ್ಮಕಾರ್ಯಗಳನ್ನು ಮಾಡಿ ಅದರಿಂದ ರುಸುಮನ್ನು ಪಡೆದರೆ ಮತ್ತು ಧರ್ಮಕಾರ್ಯ ಮಾಡಲಿಕ್ಕೆ ಸರಕಾರದಿಂದ ಇನಾಮುಗಳನ್ನು ಪಡೆದಿದ್ದರೆ ಅಂಥ ಆಸ್ತಿಗಳು ಸಾರ್ವಜನಿಕ ಜಿಮ್ಮೆ ಕಕ್ಷೆಯಲ್ಲಿ ಬರಲಾರವು. ಈ ಬಗ್ಗೆ ವಿಸ್ತೃತರೀತಿಯಿಂದ "ಧಾರ್ಮಿಕ ಉಂಬಳಿ" ಈ ಶಿರೋಲೇಖದ ಕೆಳಗೆ ವಿವರಿಸಿದ್ದಾಗಿದೆ.



# ಮಂದಿರ

ಮುಂಬಯಿ ಸಾರ್ವಜನಿಕ ಜಿಮ್ಮೆ ಕಾಯದೆಯ ೨ನೇ ಕಲ್ಮ ೧೭ನೇ ವ್ಯಾಖ್ಯೆಯಲ್ಲಿ ಸ್ಪಷ್ಟೀಕರಿಸಿದಂತೆ ಮಂದಿರದ ಅರ್ಥವು ಕೊಡಲ್ಪಟ್ಟಿದೆ. ಮದ್ರಾಸ ರಿಲಿಜಸ್ ಎಂಡೋಮೆಂಟ ಕಾಯದೆಯ ೯ನೇ ಕಲ್ಮಿನ ೧೭ನೇ ಕ್ಲಾಜಿನಲ್ಲಿ ಕೊಟ್ಟ ಮಂದಿರದ ಸಂಪೂರ್ಣವ್ಯಾಖ್ಯೆಯನ್ನೇ ಈ ಕಾಯದೆಯಲ್ಲಿ ಸ್ವೀಕರಿಸಿದ್ದಾಗಿದೆ. ಮಂದಿರವೆಂದರೆ ಯಾವದೇ ಹೆಸರಿನಿಂದ ಕರೆಯಲ್ಪಟ್ಟ ಸ್ಥಾನವಿದ್ದು ಅಂಥ ಸ್ಥಳವು ಸಾರ್ವಜನಿಕ ಧಾರ್ಮಿಕ ಪೂಜೆಗಾಗಿ ಉಪಯೋಗಿಸಲ್ಪಡಬೇಕು. ಮತ್ತು ಹಿಂದು ಸಮಾಜ ಅಥವಾ ಅದರಲ್ಲಿಯ ಯಾವದೇ ಪಂಗಡದವರ ಹಿತಕ್ಕಾಗಲಿ ಅಥವಾ ಅವರು ಹಕ್ಕಿನಿಂದ ಉಪಯೋಗಿಸಲ್ಪಡಲಿಕ್ಕಾಗಲಿ ಇರತಕ್ಕದ್ದು. ಮತ್ತು ಹಿಂದು ಸಮಾಜ ಅಥವಾ ಅದರಲ್ಲಿಯ ಯಾವದೇ ಪಂಗಡದವರ ಹಿತಕ್ಕಾಗಲಿ ಅಥವಾ ಅವರು ಹಕ್ಕಿನಿಂದ ಉಪಯೋಗಿಸಲ್ಪಡಲಿಕ್ಕಾಗಲಿ ಇರತಕ್ಕದ್ದು. ಮಂದಿರಗಳಲ್ಲಿ ಖಾಸಗಿಮತ್ತು ಸಾರ್ವಜನಿಕ ಹೀಗೆ ಎರಡು ವಿಭಾಗಗಳನ್ನು ಮಾಡಿದರೆ ಖಾಸಗಿಮಂದಿರಗಳಿಗೆ ಈ ಕಾಯದೆಯು ಅನ್ವಯಿಸುವದಿಲ್ಲ. ಯಾವದಾದರೊಂದು ಮಂಧಿರವು ಖಾಸಗಿ ಅಥವಾ ಸಾರ್ವಜನಿಕವಿರುತ್ತದೆಂಬುದನ್ನು ತಿಳಿಯಬೇಕಾದರೆ ಅದಕ್ಕೆಸಂಬಂಧಪಟ್ಟ ಆಸ್ತಿಯ ಸ್ವರೂಪ, ದಾನಶಾಸನ ಮತ್ತು ಸನದುಗಳಲ್ಲಿಯ ಕರಾರು ಮತ್ತು ಅದರ ವ್ಯಾಪಕತೆ ಮುಂತಾದವುಗಳನ್ನು ಪರಿಶೀಲಿಸಬೇಕು.

ಪೂರ್ವಕಾಲದಲ್ಲಿ ಹಿಂದೂ ಅರಸರು, ಮಾಂಡಲಿಕರು, ಜಹಾಗೀರದಾರರು ಮತ್ತು ಧಾರ್ಮಿಕ ಪ್ರವೃತ್ತಿಯುಳ್ಳ ಪುರುಷರು ತಮ್ಮ ಹೆಸರಿನಿಂದ ಮಂದಿರಗಳನ್ನು ಕಟ್ಟಿಸಿ ಅವುಗಳಲ್ಲಿ ಮೂರ್ತಿಸ್ಥಾಪನೆ ಮಾಡಿ ಭೂದಾನ ಮಾಡಿದ ಉದಾಹರಣೆಗಳು ಹಲವಾರು ನಮಗೆ ಸಿಗುತ್ತವೆ. ಹೀಗೆ ಮಂದಿರ ಅಥವಾ ಅದರಲ್ಲಿದ್ದ ಮೂರ್ತಿಯ ಹೆಸರಿಗೆ ಮಾಡಿಟ್ಟ ಭೂದಾನವು ಎಂಡೋಮೆಂಟ ಅಥವಾ ಧಾರ್ಮಿಕ ಉಂಬಳಿಯೆಂದು ಕರೆಯಲ್ಪಡುತ್ತದೆ. ಇಂಥ ಭೂದಾನಗಳಲ್ಲಿ ಕೆಲವು ಮೂರ್ತಿಗಳ ಹೆಸರಿನಿಂದ ಕೆಲವು ಮಂದಿರಗಳ ವ್ಯವಸ್ಥಾಪಕರ ಹೆಸರಿನಿಂದ ಇರುತ್ತವೆ. ಇಂಥ ವ್ಯವಸ್ಥಾಪಕರೇ ಜಿಮ್ಮೆದಾರರು (ಟ್ರಸ್ಟಿ) ಎಂದು ಕರೆಯಲ್ಪಡುತ್ತಾರೆ.

ನಮ್ಮ ಭಾರತದಲ್ಲಿ ಬೇರೆಬೇರೆ ಹೆಸರಿನ ಮಂದಿರಗಳು, ಸಣ್ಣ ಸಣ್ಣ ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ವಿಶೇಷವಾಗಿರುತ್ತವೆ. ಕೆಲವು ಮಂದಿರಗಳ ವ್ಯವಸ್ಥೆಯನ್ನು ಅವುಗಳ ಸ್ಥಾಪಕರು ಶಾಸನ ಪತ್ರದಿಂದ ತಮ್ಮ ಕುಟುಂಬಕ್ಕೇನೆ ಪ್ರತ್ಯೇಕವಾಗಿಟ್ಟುಕೊಂಡಿರುವದುಂಟು. ಇಂಥ ಮಂದಿರಗಳು ಖಾಸಗಿ ಮಂದಿರಗಳು ಅವುಗಳಿಗೆ ಸಾರ್ವಜನಿಕ ಜಿಮ್ಮೆ ಕಾಯಿದೆ ಅನ್ವಯಿಸುವದಿಲ್ಲ. ಇವುಗಳನ್ನು ಹೊರ್ತುಪಡಿಸಿ ಜಿಮ್ಮೆದಾರಿ ಚಿನ್ಹವನ್ನು ತೋರಿಸುವ ಯಾವದೇ ಮಂದಿರ ಮತ್ತು ಜಿಮ್ಮೆಯು ಇದ್ದರೆ ಮತ್ತು ಅಂಥ ಮಂದಿರದಲ್ಲಿ ಸಾರ್ವಜನಿಕರಿಗೆ ಅಥವಾ ಯಾವದಾದರೊಂದು ಸಮಾಜದ ಜನರಿಗೆ ಪ್ರವೇಶವಿದ್ದರೆ ಅದು ಮುಂಬಯಿ ಸಾರ್ವಜನಿಕ ಜಿಮ್ಮೆ ಕಾಯದೆ ಕ್ಷೇತ್ರದಲ್ಲಿ ಬರುತ್ತದೆ.

ಮಂದಿರ ಜಿಮ್ಮೆಗಳ ಬಗ್ಗೆ ಮದ್ರಾಸ, ಮುಂಬಯಿ, ಕಲಕತ್ತಾ ಹಾಯಕೋರ್ಟಗಳಲ್ಲಿ ಈ ಪೂರ್ವದಲ್ಲಿ ಅನೇಕ ವ್ಯಾಜ್ಯಗಳು ತೀರ್ಮಾನವಾಗಿರುತ್ತವೆ. ಮಂದಿರಸ್ಥಾಪಕರು ಬರೆದಿಟ್ಟ ಶಾಸನ ಪತ್ರಗಳ ಮೇಲಿಂದ ಜಿಮ್ಮೆಯ ರೂಪವು ಹೇಗೆ ಬದಲಾಗುವದೆಂಬದನ್ನು ಉದಾಹರಣೆಗಳಿಂದ ಇಲ್ಲಿ ಕೊಡಲಾಗಿದೆ. ೨೫ನೇ ಕಲಕತ್ತಾ ೧೧೨ನೇ ಪಾನಿನಲ್ಲಿ ಭಾರ್ಗವತಿ ಪ್ರಸನ್ನಸೇನ ವಿರುದ್ಧ ಗುರು ಪ್ರಸನ್ನಸೇನ ಎಂಬ ವ್ಯಾಜ್ಯವು ಪ್ರಕಟವಾಗಿದೆ. ಈ ವ್ಯಾಜ್ಯದಲ್ಲಿ ಅಂತ್ಯಲೇಖವನ್ನು ಬರೆದಿಟ್ಟವನು ತನ್ನ ಮೃತ್ಯುಪತ್ರದಿಂದ ಕೆಲವು ಇಮಾರತಿಗಳನ್ನು ದಾನವಾಗಿ ಕೊಟ್ಟು ಅವುಗಳಿಗೆ ಕೆಲವು ಕರಾರುಗಳನ್ನು ವಿಧಿಸಿದ್ದಾಗಿದೆ. ಆತನ ಉದ್ದೇಶದ ಮೇರೆಗೆ ಮೃತ್ಯುಪತ್ರದ ಆಸ್ತಿಯವಿನಿಯೋಗ ಮೊದಲು ಮೂರ್ತಿಯ ಪೂಜಾ ಪುನಸ್ಕಾರದ ಬಗ್ಗೆ ಉಪಯೋಗವಾಗತಕ್ಕದ್ದು ನಂತರ ತನ್ನ ಮಕ್ಕಳ ಮತ್ತು ಅವರ ಕುಟುಂಬದ ಹಿತಸ್ವತ್ವದ ಬಗ್ಗೆ ಆಗತಕ್ಕದ್ದು. ಈ ಪ್ರಕಾರದ ವಿಧಿಯನ್ನು ಮೃತ್ಯುಪತ್ರಕಾರನು ಹಾಕಿದ್ದರೂ ಶ್ರೀಶೈಲ ನ್ಯಾಯಮೂರ್ತಿಯವರು ಜಿಮ್ಮೆ ಕೊಟ್ಟ ಉದ್ದೇಶವು ಮೃತ್ಯುಪತ್ರದೊಳಗಿನ ಸಂಗತಿಗಳ ಮೇಲಿಂದ ತನ್ನ ವಂಶ ಪರಂಪರವಾಗಿ ವಾರಸಾನಾಶದಿಂದ ಆಸ್ತಿಗಳು ಹೋಗಬಾರದೆಂದು ಇದ್ದದರಿಂದ ಅದು ಸಾರ್ವಜನಿಕ ಜಿಮ್ಮೆ ಆಸ್ತಿ ಆಗುತ್ತದೆಂದು ತೀರ್ಮಾನಕೊಟ್ಟಿದ್ದಾರೆ.

ಮತ್ತೊಂದು ಕಲಕತ್ತಾ ಹಾಯಕೋರ್ಟಿನ ವ್ಯಾಜ್ಯದಲ್ಲಿ ನಮೂದಾದ ಮೃತ್ಯುಪತ್ರದಲ್ಲಿ ಯಾವತ್ತೂ ಸ್ಥಾವರ ಆಸ್ತಿಗಳನ್ನು ಮಂದಿರದಲ್ಲಿದ್ದ ಮೂರ್ತಿಯ ಪೂಜಾವಿನಿಯೋಗಕ್ಕಾಗಿ ಉಪಯೋಗಿಸತಕ್ಕದ್ದು. ಮತ್ತು ಅದರ ವ್ಯವಸ್ಥೆಯನ್ನು ಮೃತ್ಯು ಶಾಸನ ಬರೆದಿಟ್ಟವನ ಕುಟುಂಬದವರೇ ಮಾಡುತ್ತಹೋಗಬೇಕು. ಮತ್ತು ಹೀಗೆ ಜಿಮ್ಮೆ ಕೊಟ್ಟ ಆಸ್ತಿಯ ಉತ್ಪನ್ನದಲ್ಲಿ ತಮ್ಮ ಉಪಜೀವನದ ಸಲುವಾಗಿ ಕೆಲವು ಭಾಗ ತೆಗೆದುಕೊಳ್ಳತಕ್ಕದ್ದು. ಈ ಪ್ರಕಾರವಾಗಿ ವಿಧಿಸಿದ್ದರೂ ಆ ಶಾಸವವು ಸಾರ್ವಜನಿಕ ಜಿಮ್ಮೆ ಶಾಸನವಾಗುತ್ತಿದ್ದು ಖಾಸಗಿ ಆಸ್ತಿ ಆಗುವದಿಲ್ಲವೆಂದು ತೀರ್ಮಾನವಾಗಿದೆ.

**ಮಂದಿರ ಉತ್ಪತ್ತಿ** :- ೨೭ ನೇ ಎಮ್. ಎಲ್. ಜೇ. ಪಾನು ೫೩ ನೇದ್ದರಲ್ಲಿ ಮದ್ರಾಸ ಹಾಯಕೋರ್ಟಿನ ನ್ಯಾಯಾಧೀಶರಾದ ಶ್ರೀ ಸದಾಶಿವ ಅಯ್ಯರ ಇವರು ಮಂದಿರದ ಉತ್ಪತ್ತಿಯ ಬಗ್ಗೆ ಈ ಕೆಳಗಿನಂತೆ ಹೇಳಿದ್ದಾರೆ.

ತ್ರೈತಾಯುಗ ಕಾಲದಿಂದ ಗುಡಿಗಳಲ್ಲಿ ಮೂರ್ತಿಪೂಜೆ ನಡೆಯುತ್ತ ಬಂದಿದೆ. ಕೃತಾಯುಗದಲ್ಲಿ ಪ್ರತಿಯೊಂದು ವಸ್ತುವಿನಲ್ಲಿ ದೇವರ ಅಂಶವಿರುತ್ತದೆಂಬ ಭಾವನೆಯಿಂದ ದೇವರ ಆರಾಧನೆಯು ನಡೆದಿದ್ದಿತು. ಮತ್ತು ಈ ಆರಾಧನೆಯು ಕೇವಲ ವಿಶ್ವಬಂಧುತ್ವ ರೀತಿಯಲ್ಲಿ ಮಾನವ ಸೇವೆಯಾಗಿದ್ದಿತು. ಈ ಪ್ರಕಾರದ ವಿಶ್ವಬಂದುತ್ವ ಭಾವನೆಯು ಕಾಲಾಂತರದಲ್ಲಿ ಹ್ರಾಸವಾಗುತ್ತಾ ಉಚ್ಚ ನೀಚ ಭಾವನೆಗಳು ತಲೆದೋರಹತ್ತಿದವು. ನೀಚ ವೃತ್ತಿಯ ಮನುಷ್ಯನು ಉಚ್ಚವೃತ್ತಿಯ ಮನುಷ್ಯನಲ್ಲಿ ದೇವಾಂಶವನ್ನು ಭಾವಿಸಿ ಆತನನ್ನು ಪೂಜಿಸತೊಡಗಿದನು. ಈ ಕಾರಣದಿಂದ ಪರಸ್ಪರರಲ್ಲಿ ಕಲಹವು ಪ್ರಾಪ್ತವಾದ್ದರಿಂದ ಆ ಕಾಲದ ತತ್ವವೇತ್ತಿಗಳು ಮೂರ್ತಿಪೂಜೆಮಾಡುವದನ್ನು ಬೋಧಿಸಿದರು. ಅಂದಿನಿಂದ ಮೂರ್ತಿಪೂಜೆಯು ರೂಢಿಯಲ್ಲಿ ಬಂದು ವ್ಯಾಪಕರೀತಿಯಿಂದ ಇಡೀ ಭರತಖಂಡಕ್ಕೇ ಆವರಿಸಿತು. ಆಗಮಗಳು ಮತ್ತು ತಂತ್ರಗಳು ಮಂದಿರಗಳಲ್ಲಿಯ ಪೂಜೆಯನ್ನು ಪ್ರತಿಪಾದಿಸುತ್ತವೆ. ಆಧ್ಯಾತ್ಮಿಕ ಸಾಧನೆಗಾಗಿ ಮಂದಿರಗಳು ಸ್ಥಾಪಿಸಲ್ಪಟ್ಟವೆ.

ಮಂದಿರ ವ್ಯವಸ್ಥೆ :— ಮಂದಿರದಲ್ಲಿ ಸ್ಥಾಪಿಸಲ್ಪಟ್ಟ ಮೂರ್ತಿಪೂಜಾ ವ್ಯವಸ್ಥೆಗಾಗಿ ಅರ್ಚಕ, ಶೇಬಾಯಿತ, ಧರ್ಮದರ್ಶಿ ಹೀಗೆ ಮಂದಿರಾಧಿಕಾರಿಗಳನ್ನು ನೇಮಿಸಲಾಗುತ್ತದೆ. ಮೂರ್ತಿಪೂಜೆ ಮಾಡಲಿಕ್ಕೆ ಪೂಜಾರಿ ಅಥವಾ ಅರ್ಚಕರು ಇರುತ್ತಾರೆ. ಮಂದಿರದ ಆಸ್ತಿಗಳನ್ನು ವ್ಯವಸ್ಥೆ ಮಾಡುವವರು ಕೆಲವು ಕಡೆಗೆ ಶೇಬಾಯಿತ ಮತ್ತು ಬೇರೆಕಡೆಗೆ ಧರ್ಮದರ್ಶಿಗಳು ಇರುತ್ತಾರೆ. ದೇವರ ಹೆಸರಿನಿಂದ ಯಾರಾದರೂ ಭಕ್ತರು ಆಸ್ತಿಗಳನ್ನು ಕೊಟ್ಟಿದ್ದಾಗಿದ್ದರೆ ಅವುಗಳ ವ್ಯವಸ್ಥೆಯನ್ನು ಮೇಲ್ಕಾಣಿಸಿದ ಮಂದಿರಾಧಿಕಾರಿಗಳು ಮಾಡುತ್ತಾರೆ. ಇವರು ದೇವಸ್ಥಾನದ ಟ್ರಸ್ಟಿಗಳು ಇರುತ್ತಾರೆ. ದೇವರ ಹೆಸರಿನಿಂದ ಕೊಟ್ಟ ಆಸ್ತಿಯ ಬಗ್ಗೆ ಕೋರ್ಟಿನಲ್ಲಿ ವ್ಯಾಜ್ಯವನ್ನು ಹೂಡುವದಾದರೆ ದೇವರ ಹೆಸರನ್ನು ಕಾಣಿಸಿ ಅದರ ಪರವಾಗಿ ಅದರ ವ್ಯವಸ್ಥೆ ಮಾಡತಕ್ಕ ಶೇಬಾಯಿತ ಅಥವಾ ಅರ್ಚಕನ ಹೆಸರನ್ನು ಕಾಣಿಸಬೇಕು. ಮಂದಿರದ ಆಡಳಿತೆ ಮತ್ತು ಮಂದಿರದಲ್ಲಿದ್ದ ಮೂರ್ತಿಪೂಜೆಯ ಪದ್ಧತಿ ಮತ್ತು ಪರಂಪರೆಯು ವಿಶೇಷತಃ ಮಂದಿರ ಸ್ಥಾಪಕನ ಉದ್ದೇಶದಂತೆ ಅಥವಾ ಆತನು ಬರೆದಿಟ್ಟ ಶಾಸನದಂತೆ ನಡೆಯುತ್ತದೆ. ಮಂದಿರದಲ್ಲಿದ್ದ ದೇವರ ಮೂರ್ತಿಗೆ ಯಾರಾದರೂ ಕಾಣಿಕೆ ಮೊದಲಾದವುಗಳನ್ನು ಅರ್ಪಿಸಿದಲ್ಲಿ ಅಂಥ ಅರ್ಪಣೆಯು ವ್ಯವಸ್ಥಾಪಕನ ಅಥವಾ ಅರ್ಚಕನ ಖಾಸಗಿ ಆಸ್ತಿಯಾಗಲಾರದು.

ಮಂದಿರದ ಆಸ್ತಿಗಳಲ್ಲಿ ಸಾರ್ವಜನಿಕ ಮತ್ತು ಖಾಸಗಿ ಹೀಗೆ ಎರಡು ವಿಧವಾದ ಧಾರ್ಮಿಕ ಉಂಬಳಿಗಳುಂಟು. ಸಾರ್ವಜನಿಕ ಹಿತದ ಸಲುವಾಗಿ ಮತ್ತು ಉಪಯೋಗದ ಸಲುವಾಗಿ ಅರ್ಪಿಸಲ್ಪಟ್ಟ ಆಸ್ತಿಗಳು ಸಾರ್ವಜನಿಕ ಧಾರ್ಮಿಕ ಉಂಬಳಿಗಳೆಂದು ಕರೆಯಲ್ಪಡುತ್ತವೆ. ಯಾವದಾದರೊಂದು ಮನೆತನಕ್ಕೆ ಸಂಬಂಧಪಟ್ಟ ಮಂದಿರದ ವ್ಯವಸ್ಥೆಗಾಗಿ ಆಸ್ತಿಗಳನ್ನು ಅರ್ಪಿಸಿದ್ದಾದರೆ ಅವು ಖಾಸಗಿ ಧಾರ್ಮಿಕ ಉಂಬಳಿಯಾಗುತ್ತವೆ.

[ಮಂದಿರದ ಬಗ್ಗೆ ಹೆಚ್ಚಿನ ವಿವರವನ್ನು "ಮಠ" ಈ ಶಿರೋಲೇಖದ ಕೆಳಗೆ ಕಾಣಬಹುದು.]

# ವಾಕ್ಫ

ವಾಕ್ಫ ಅಂದರೆ– ಇಸ್ಲಾಮ ಧರ್ಮದ ಅನುಯಾಯಿಯು ಧಾರ್ಮಿಕ ಧರ್ಮಾರ್ಥ ಅಥವಾ ಸತ್ಕಾರ್ಯಕ್ಕಾಗಿ ತನ್ನ ಆಸ್ತಿಯನ್ನು ಆಚಂದ್ರಾರ್ಕ ವಾಗಿ ಅರ್ಪಣೆ ಮಾಡುವದು,

೧) ಇಸ್ಲಾಮ ಧರ್ಮ ಪದ್ಧತಿಯ ಮೇರೆಗೆ ಮಸೀದೆಯಲ್ಲಿ ರೋಶ ನಾಯಿ (ದೀವಿಗೆ) ಹಚ್ಚುವದು.

೨) ಪೇಶ ಇಮಾಮನನ್ನು ಮಸೀದೆಯ ವ್ಯವಸ್ಥೆಯ ಬಗ್ಗೆ ನೇಮಿಸು ವದು.

೩) ಖತಂ ಶರೀಫ ಮಾಡುವದು.

೪) ತನ್ನ ಘರಾಣೇದ ಜನರ ಅಥವಾ ತನ್ನ ಪುಣ್ಯತಿಥಿಯನು.. (ಬಾರ್ಸಿ) ಮಾಡುವ ಬಗ್ಗೆ ಯೋಜನೆ ಮಾಡುವದು.

೫) ಸಾರ್ವಜನಿಕ ಸ್ಥಳದಲ್ಲಿ ಖುರಾನ ಓದಿಸುವದು.

೬) ತನ್ನ ಘರಾಣೇದ ಜನರ ಅಥವಾ ತನ್ನ ಫಾತ್ಯ ಓದಿಸುವದು: ಉರುಸು ಮಾಡಿಸುವದುವಂತಾದ

●) ಕಾರ್ಯಗಳನ್ನು ಜರಗಿಸುವದಕ್ಕಾಗಿ ವಾಕ್ಫನಾಮೆಯನ್ನು ಮಾಡಬಹುದು.

ಇಸ್ಲಾಮ ಧರ್ಮದ ಅನುಯಾಯಿಯಾದ ಯಾವನಾದರೂ ತನ್ನ ಸ್ಥಾವರ ಅಥವಾ ಜಂಗಮ ಆಸ್ತಿಯನ್ನು ವಾಕ್ಫ ಮಾಡಬಹುದು.

ಯಾವದೇ ಮುಸಲ್ಮಾನನು ಧಾರ್ಮಿಕ ಬುದ್ಧಿಯಿಂದ ಸತ್ಕಾರ್ಯಗ ಳನ್ನು ಜರಗಿಸುವದಕ್ಕಾಗಿ ತನ್ನ ಎಲ್ಲ ಅಥವಾ ಕೆಲವು ಆಸ್ತಿಯನ್ನು ವಾಕ್ಫ ಮಾಡಬಹುದು,

ವಾಕ್ಫನಾಮಾದಲ್ಲಿ ದೇವರ ಹೆಸರಿನಿಂದ ಆಸ್ತಿಗಳನ್ನು ಬರೆದಿಟ್ಟು ಅಂಥ ಎಲ್ಲ ಆಸ್ತಿಗಳ ವ್ಯವಸ್ಥೆಯನ್ನು ಮಾಡಲಿಕ್ಕೆ ಒಬ್ಬ ಮುತವಲ್ಲಿ ಅಥವಾ ಮೇಲ್ವಿಚಾರಕನನ್ನು ನೇಮಿಸುವ ಪದ್ಧತಿಯು ಅದೆ. ವಾಕ್ಫನಾಮಾ ಬರೆದಿಡುವಂಥವನು ಸಹ ತಾನೇ ಮುತವಲ್ಲಿಯೆಂದು ನೇಮಿಸಿಗೊಳ್ಳಲಿಕ್ಕೆ ಬರುತ್ತದೆ.

ಹೀಗೆ ವಾಕ್ಫನಾಮಾದಿಂದ ಧಾರ್ಮಿಕ ಅಥವಾ ಸತ್ಕಾರ್ಯದ ಸಲುವಾಗಿ ಆಸ್ತಿಗಳು ಒಮ್ಮೆ ಕೊಡಲ್ಪಟ್ಟರೆ ಆ ಎಲ್ಲ ಆಸ್ತಿಗಳು ಮಾಲಿಕನಿಂದ ದೇವರಿಗೆ ಅರ್ಪಿತವಾದ ಆಸ್ತಿಗಳಾಗುತ್ತವೆ. ಮತ್ತು ವಾಕ್ಫನಾಮಾ ಬರೆದಿಟ್ಟವನ ಎಲ್ಲ ಹಕ್ಕುಗಳು ನಷ್ಟವಾಗುತ್ತವೆ. ದೇವರಿಗೆ ಅರ್ಪಿಸಲ್ಪಟ್ಟ ಆಸ್ತಿಯನ್ನು ಮುತವಲ್ಲಿಯು ಯಾವದೇ ರೀತಿಯಿಂದ ಪರಾಧೀನ ಮಾಡಲಿಕ್ಕೆ ಬರುವದಿಲ್ಲ. ಕೋರ್ಟಿನಿಂದ ಪರವಾನಗಿ ಪಡಕೊಂಡಾಗಲಿ, ವಾಕ್ಫನಾಮಾದಲ್ಲಿ ಪರಾಧೀನಮಾಡಲು ಅಧಿಕಾರ ಕೊಟ್ಟಿದ್ದರಿಂದಾಗಲಿ ಮುತವಲ್ಲಿಯು ವಾಕ್ಫ ಆಸ್ತಿಯನ್ನು ಆ ಮೇರೆಗೆ ಪರಾಧೀನಮಾಡಬಹುದು.

## ಧಾರ್ಮಿಕ ಉಂಬಳಿಗಳು

೧೯೫೦ನೇ ಸಾಲಿನ ಸಾರ್ವಜನಿಕ ಜಿಮ್ಮೆ ಕಾಯದೆಯು ಅಮಲಿನಲ್ಲಿ ಬಂದನಂತರ ಮುಖ್ಯವಾಗಿ ಮಠಮಂದಿರ ಮತ್ತು ಮಸೀದೆಗಳ ಒಡೆಯರು ಅಥವಾ ಧರ್ಮದರ್ಶಿಗಳು ತಮ್ಮ ಸ್ಥಾನಮಾನಗಳ ಬಗ್ಗೆ ವಿಚಾರಿಸಿ ಒಂದು ನಿರ್ಣಯಕ್ಕೆ ಬರುವದು ಅಗತ್ಯವಾಗಿದೆ. ಈ ಜಿಮ್ಮೆ ಕಾಯದೆ ಮೇರೆಗೆ ಯಾವದಾದರೂ ಮಠಮಂದಿರ ಅಥವಾ ಮಸೀದಿಯು ಸಾರ್ವಜನಿಕ ವಿಶ್ವಸ್ಥ ಆಸ್ತಿ ಇದ್ದರೆ ಮಾತ್ರ ಅದಕ್ಕೆ ಈ ಕಾಯದೆಯು ಹತ್ತುತ್ತದೆ. ಇಲ್ಲದಿದ್ದರೆ ಈ ಕಾಯದೆಯು ಹತ್ತುವದಿಲ್ಲವೆಂಬುದು ನಿರ್ವಿವಾದ. ಎಷ್ಟೋ ಮಠ ಮಂದಿರ ಮತ್ತು ಮಸೀದೆಗಳಿಗೆ ಬ್ರಿಟಿಶ ಸರಕಾರದ ಆಡಳಿತೆಯಲ್ಲಿ ಮತ್ತು ಅದಕ್ಕೂ ಪೂರ್ವದಲ್ಲಿ ದಾನಶಾಸನ, ಇನಾಮು, ಸನದು ಮುಂತಾದವುಗಳು ಕೊಡಲ್ಪಟ್ಟಿದ್ದು ಅಂಥ ಶಾಸನ ಪತ್ರಗಳ ಮೇಲಿಂದ ಯಾವ ಆಸ್ತಿಗಳು ಸಾರ್ವಜನಿಕ ಅಥವಾ ಖಾಸಗಿ ಆಸ್ತಿಗಳು ಆಗುತ್ತವೆಂಬುದನ್ನು ಚರ್ಚಿಸುವದೇ ಮುಖ್ಯ ಉದ್ದೇಶವಾಗಿದೆ.

ಮಠ ಮತ್ತು ಮಂದಿರಗಳು ಈಗ ಸುಮಾರು ೨ಸಾವಿರ ವರ್ಷಗಳಿಂದ ಅಸ್ತಿತ್ವದಲ್ಲಿ ಬಂದವೆಂದು ಹೇಳಲಿಕ್ಕೆ ಆಧಾರಗಳು ದೊರೆಯುತ್ತವೆ. ಸ್ವಲ್ಪ

ಹೆಚ್ಚು ಕಡಿಮೆ ಆ ಕಾಲದಿಂದಲೇನೇ ಮಠ ಮತ್ತು ಮಂದಿರಗಳಿಗೆ ಧಾರ್ಮಿಕ ಉಂಬಳಿ ಆಸ್ತಿಗಳನ್ನು ದಾತೃಗಳು ಕೊಡುತ್ತಾ ಬಂದಿರುತ್ತಾರೆಂದು ಹೇಳಬಹುದು. ಮೊಟ್ಟಮೊದಲು ಮಂದಿರಗಳು ಸ್ಥಾಪಿಸಲ್ಪಟ್ಟಿದ್ದು ಅಂಥ ಮಂದಿರಗಳಲ್ಲಿಯು ಮೂರ್ತಿ ಪೂಜೆಯನ್ನು ನಿರ್ವಿಘ್ನವಾಗಿ ಜರುಗಿಸಲಿಕ್ಕೆ ಮತ್ತು ಮಂದಿರದ ವ್ಯವಸ್ಥೆಯನ್ನು ನೋಡಲಿಕ್ಕೆ ಅರ್ಚಕರನ್ನು ನೇಮಿಸಿ ಅವರಿಗೆ ಶ್ರಮಾಂಶ ಹಣವನ್ನು ಮತ್ತು ಭೂಮಿಯನ್ನು ಮಂದಿರ ಸ್ಥಾಪಕರು ಕೊಡುತ್ತಿದ್ದರು. ಅರ್ಚಕರು ತಮ್ಮ ವಂಶಪರಂಪರೆಯಾಗಿ ಮೂರ್ತಿ ಪೂಜೆಯನ್ನು ಸರಿಯಾದ ರೀತಿಯಿಂದ ನಡೆಸಿಕೊಂಡು ಹೋಗಬೇಕೆಂಬುದೇ ಈ ದಾನದ ಉದ್ದೇಶವಾಗಿದ್ದಿತು. ಮಠಗಳ ಬಗ್ಗೆ ಸಹ ಪೂರ್ವಕಾಲದಲ್ಲಿ ದಾನಶಾಸನಗಳು ಹುಟ್ಟಿದ್ದು ಅವುಗಳ ಸಹಾಯದಿಂದ ಎಷ್ಟೋ ಮಠಗಳು ಭಾರತದಲ್ಲಿ ಬೆಳಕಿಗೆ ಬಂದವು.

ಮಂದಿರಗಳಿಗೆ ಕೊಟ್ಟ ಉಂಬಳಿ ಆಸ್ತಿಗಳು ಬಹುತರವಾಗಿ ಮೂರ್ತಿಯ ಹೆಸರಿನಿಂದ ಇರುತ್ತಿದ್ದು ಮೂರ್ತಿ ಪೂಜೆಮಾಡುವ ಅರ್ಚಕರು ಅಥವಾ ಮಂದಿರದ ವ್ಯವಸ್ಥಾಪಕರು ಮೂರ್ತಿಯ ಪರವಾಗಿ ವ್ಯವಸ್ಥೆ ಮಾಡುವ ಜವಾಬ್ದಾರರಾಗಿರುತ್ತಾರೆ. ಅವರಿಗೆ ಅಂಥ ಉಂಬಳಿಯಲ್ಲಿ ಅಥವಾ ಅದರ ಉತ್ಪನ್ನದಲ್ಲಿ ಏನೂ ಸ್ವತಂತ್ರ ಅಧಿಕಾರವಿರುವದಿಲ್ಲ. ಆದರೆ ಮಠಾಧಿಪತಿಗಳ ಅಥವಾ ಮಹಂತರ ಸ್ಥಾನವು ಹಾಗೆ ಇರುವದಿಲ್ಲ. ಮಠಕ್ಕೆ ದಾನವಾಗಿ ಕೊಟ್ಟ ಆಸ್ತಿಗಳನ್ನು ಮಠದ ಅಭಿವೃದ್ಧಿಗಾಗಿ ಉಪಯೋಗಿಸುತ್ತಾ ಅವುಗಳಿಗೆ ಹಾನಿ ತಟ್ಟದಂತೆ ಅವುಗಳಿಂದ ಬಂದ ಉತ್ಪನ್ನವನ್ನು ತನ್ನ ಸ್ವತಂತ್ರ ಸೊತ್ತಿನಂತೆ ಉಪಯೋಗಮಾಡಬಹುದು. ಹೀಗೆ ಮಂದಿರದ ಅರ್ಚಕ ಮಠದ ಮಹಂತರ ಹಕ್ಕು ಬಾಧ್ಯತೆಗಳಲ್ಲಿ ತಾರತಮ್ಯವಿರುವದರಿಂದ ಮಂದಿರಗಳಿಗೆ ಹಾಕಿ ಕೊಟ್ಟ ಸನದುಶಾಸನಗಳು ಮಠಗಳಿಗೆ ಹಾಕಿ ಕೊಟ್ಟ ಸನದು ಶಾಸನಗಳಿಗಿಂತ ಭಿನ್ನವಾದವುಗಳು ಇರುತ್ತವೆ. ಅದ್ದರಿಂದ ಮಠ ಮತ್ತು ಮಂದಿರಗಳ ಸನದುಗಳಲ್ಲಿ ಕಂಡ ವಿಷಯಗಳ ಮೇಲಿಂದ ಮತ್ತು ಅಂಥ ಸಂಸ್ಥೆಗಳ ಬಹುಕಾಲ ಪದ್ಧತಿ ಮತ್ತು ವ್ಯವಸ್ಥೆಯ ರೀತಿಗಳ ಮೇಲಿಂದ ಅವರವರ ಹಕ್ಕುಗಳನ್ನು ನಿರ್ಣಯಿಸುವದು ಸರಿಯಾದದ್ದು. ಮಂದಿರದಲ್ಲಿ ಮೂರ್ತಿಯು, ಮಠದಲ್ಲಿ ಗುರುಸ್ಥಾನವು ಶಾಸನ ಸಮ್ಮತ ವ್ಯಕ್ತಿಗಳೆಂದು (Juridical person) ಗ್ರಹಿಸಲಾಗಿದೆ.

ಮೂರ್ತಿಯ ಪೂಜಕನು ಮೂರ್ತಿಯ ಪವಿತ್ರತೆ ಮತ್ತು ಆದರ ಗೌರವ ಸ್ಥಾನವನ್ನು ಪಡೆಯಲಾರನು. ಆದರೆ ಗುರುಸ್ಥಾನದ ಮೇಲೆ ಆರೋಹಣ ಮಾಡಿದ ಗುರುವು ಮೂಲ ಗುರುವಿನ ಕಳೆಯಿದ್ದವನು ಅಥವಾ ಮೂಲ ಕರ್ತೃವಿನ ಪರಾವತಾರಿಯೆಂದು ಮಠದ ಅನುಯಾಯಿಗಳು ಗ್ರಹಿಸುತ್ತಾರೆ. ಆದ್ದರಿಂದ ಅರ್ಚಕ ಮತ್ತು ಗುರುಗಳ ಹಕ್ಕು ಬಾಧ್ಯತೆಯಲ್ಲಿ ಆಧ್ಯಾತ್ಮಿಕ ರೀತಿಯಿಂದ ಭೇದವಿದ್ದಂತೆ ಭೌತಿಕ ಹಕ್ಕುಗಳಲ್ಲಿ ಭೇದವಿದ್ದದ್ದು ಯೋಗ್ಯ ವಾದದ್ದಿರುತ್ತದೆ.

ಐತಿಹಾಸಿಕ ಕಾಲದಲ್ಲಿ ಮಠ ಮತ್ತು ಮಂದಿರಗಳಿಗೆ ಧಾರ್ಮಿಕ ಉಂಬಳಿಗಳನ್ನು ಹಾಕಿಕೊಟ್ಟದ್ದನ್ನು ಮುಸಲ್ಮಾನ ಬಾದಶಹರ, ಪೇಶ್ವಾಯಿ ಯವರ ಮತ್ತು ಬ್ರಿಟಿಶರ ಆಳಿಕೆಯಲ್ಲಿ ಕಾಣಬಹುದು. ನಮ್ಮ ದೇಶವು ಸ್ವತಂತ್ರವಾಗುವ ಪೂರ್ವದಲ್ಲಿ ಬ್ರಿಟಿಶರ ಆಳಿಕೆಯಲ್ಲಿ ಧಾರ್ಮಿಕ ಉಂಬಳಿ ಮೇಲೆ ನಿರ್ಬಂಧ ಹಾಕುವದಕ್ಕಾಗಿ ಅನೇಕ ನಿಯಮ ಮತ್ತು ಕಾನೂನುಗಳು ರಚಿಸಲ್ಪಟ್ಟವು. ಇಂಥ ಉಂಬಳಿಗಳಿಗೆ ಇನಾಮುಗಳೆಂದು ಕರೆಯುತ್ತಾರೆ. ಈ ಇನಾಮು ಮೂರು ಪ್ರಕಾರವಿರುತ್ತವೆ. ಅವು ೧) ಭೂದಾನ ಅಥವಾ ಜಮೀನು ತೆಗೆದುಕೊಳ್ಳುವದು. ೨) ಭೂಮಿಯಲ್ಲಿ ಬೆಳೆದ ಪೀಕಿನಲ್ಲಿ ಕೆಲವು ಭಾಗ ತೆಗೆದುಕೊಳ್ಳುವದು ಅಥವಾ ೩) ಸರಕಾರದ ಬೊಕ್ಕಸದಿಂದ ವರ್ಷಾಸನವನ್ನು ಪಡೆಯುವದು. ಹೀಗೆ ಮೂರು ಪ್ರಕಾರವಾಗಿದ್ದ ಇನಾಮುಗಳಲ್ಲಿ ೧) ಸೇವೆಗಾಗಿ ಕೊಟ್ಟ ದಾನ (service-inam) ಮತ್ತು ಸೇವೆ ಇಲ್ಲದ ದಾನ ( non-service Inam ) ಹೀಗೆ ಎರಡು ಭಾಗಗಳು ಇರುತ್ತವೆ.

## ಸೇವೆಗಾಗಿದ್ದ ದಾನ (ಸರ್ವಿಸ ಇನಾಮು)

ಸೇವೆ ಸಲ್ಲಿಸುವದಕ್ಕಾಗಿ ಕೊಟ್ಟ ಇನಾಮು ಜಮೀನುಗಳು, ಸೇವೆ ಸಲ್ಲಿಸದಿದ್ದರೂ ಸಹ ಇನಾಮುಗಳಾಗಿಯೇ ಉಳಿಯುತ್ತವೆ. ಹೀಗೆ ಕೊಟ್ಟ ಇನಾಮು ಜಮೀನುಗಳು ಹಿಂದೆ ಸೇವೆಸಲ್ಲಿಸಿದ್ದಕ್ಕಾಗಿ ಮತ್ತು ಮುಂದೆ ಸೇವೆ ಸಲ್ಲಿಸುವದಕ್ಕಾಗಿ ಇದುತ್ತವೆ. ೧೮೩೭ನೇ ಸಾಲಿನಿಂದ ಇನಾಮುಗಳ ಬಗ್ಗೆ ನಿಯಮ ಮತ್ತು ರೆಗ್ಯುಲೇಶನ್ನುಗಳನ್ನು ಬ್ರಿಟಿಶ ಸರಕಾರದವರು

ಆಗಾಗ್ಗೆ ಮಾಡುತ್ತಾ ಕಡೆಗೆ ೧೮೫೨ನೇ ಸಾಲಿನಲ್ಲಿ ಒಂದು ಕಾಯದೆ ಪಾಸು ಮಾಡಿದರು. ಅದು ಮುಂಬಯಿ ೧೮೫೨ನೇ ೧೧ನೇ ಆ್ಯಕ್ಟ ಎಂದು ಕರೆಯಲ್ಪಟ್ಟಿದೆ. ಈ ಕಾಯದೆಯಾಗುವ ಪೂರ್ವದಲ್ಲಿ ಪೇಶವಾಯಿಯವರು ಅಥವಾ ಮೊಗಲ ಬಾದಶಹರು ಕೊಟ್ಟ ಸನದುಗಳ ಮೇಲಿಂದ ಎಷ್ಟೋ ಧಾರ್ಮಿಕ ಕೆಲಸ ಮಾಡುವ ಧರ್ಮಾಧಿಕಾರಿಗಳು ಜಮೀನುಗಳನ್ನು ಉಪಭೋಗ ಮಾಡುತ್ತಿದ್ದರು. ಇದರಲ್ಲಿ ನ್ಯೂನತೆಗಳು ಕಂಡುಬಂದದ್ದರಿಂದ ಮತ್ತು ಈ ಜಮೀನುಗಳ ಬಗ್ಗೆ ಆಗಾಗ್ಗೆ ಕಲಹಗಳು ಉದ್ಭವವಾಗುತ್ತಿದ್ದುದರಿಂದ ಅವುಗಳನ್ನು ನಿವಾರಣೆ ಮಾಡುವದಕ್ಕಾಗಿ ೧೮೫೨ನೇ ಇಸ್ವಿಯ ಕಾಯದೆಯು ಅಮಲಿನಲ್ಲಿ ಬಂದಿತು.

ಬ್ರಿಟಿಶ ಸರಕಾರದವರು ದಾನಶಾಸನಗಳಲ್ಲಿ ಸರಕಾರಿ ಉಪಯೋಗಿ ಮತ್ತು ಗ್ರಾಮೋಪಯೋಗಿ ಹೀಗೆ ಎರಡು ವಿಭಾಗಗಳನ್ನು ಮಾಡಿಕೊಟ್ಟಿದ್ದಿರುತ್ತದೆ. ನಮಗೆ ಈಗ ಸಂಬಂಧಪಟ್ಟ ವಿಷಯವೆಂದರೆ ಗ್ರಾಮೋಪಯೋಗದ ಬಗ್ಗೆ ಕೊಟ್ಟ ದಾನಶಾಸನಗಳು.

ಗ್ರಾಮದಲ್ಲಿ ಸಾಮಾಜಿಕ, ವ್ಯವಹಾರಿಕ ಮತ್ತು ಧಾರ್ಮಿಕ ಕಾರ್ಯಗಳು ನಿರ್ವಿಘ್ನವಾಗಿ ನಡೆದು ಹಳ್ಳಿಯಲ್ಲಿಯ ಜೀವನವು ಶಾಂತಿಮಯವಾಗಿರಬೇಕೆಂದು ಬ್ರಿಟಿಶ ಸರಕಾರದವರು ಕೆಲವು ಉಂಬಳಿಗಳನ್ನು ಹಾಕಿಕೊಟ್ಟರು. ಕೆಲ ಕೆಲವು ಹಳ್ಳಿಗಳಲ್ಲಿ ಸುತಾರ, ಕಂಬಾರ ನಾವಲಿಗ ಮೊದಲಾದ ಹಳ್ಳಿಯ ರೈತರ ಕೆಲಸ ಮಾಡುವವರಿಗೆ ಇನಾಮುಗಳು ಇರುತ್ತವೆ. ಧಾರ್ಮಿಕ ಮತ್ತು ಸಾಮಾಜಿಕ ಕೆಲಸ ಮಾಡುವ ಖಾಜಿ, ಜೋಶಿ, ಜಂಗಮ, ಮುಲ್ಲಾ ಮೊದಲಾದವರಿಗೆ ಸಹ ಸರ್ವಿಸ ಇನಾಮುಗಳನ್ನು ಬ್ರಿಟಿಶ ಸರಕಾರದವರು ನಡೆಸಿರುತ್ತಾರೆ. ಹೀಗೆ ಬೇರೆ ಬೇರೆ ವ್ಯವಸಾಯ ಮಾಡುವವರಿಗೆ ಸನದುಗಳನ್ನು ಕೊಟ್ಟು ಜಮೀನುಗಳನ್ನು ಕೊಟ್ಟ ಉದಾಹರಣೆಗಳು ಬಹಳ ವಿರುತ್ತವೆ. ಪ್ರತಿಯೊಂದು ಸಮಾಜದಲ್ಲಿ ಸಾಮಾಜಿಕ ಕಾರ್ಯಗಳು ನಿರ್ವಿಘ್ನರೀತಿಯಿಂದ ನಡೆಯಬೇಕೆಂದು ಆ ಸಮಾಜದಲ್ಲಿಯ ಧರ್ಮಾಧಿಕಾರಿಗಳಿಗೆ ಸರ್ವಿಸ ಇನಾಮು ಜಮೀನುಗಳನ್ನು ಕೊಟ್ಟು ನಡೆಸಿರುತ್ತಾರೆ. ಈ ಧರ್ಮಾಧಿಕಾರಿಗಳು ತಮ್ಮ ಘರಾಣೇದ ಪರಂಪರೆಯ ಪದ್ಧತಿ ಮೇರೆಗೆ ಧರ್ಮ ಕಾರ್ಯಗಳನ್ನು ಮಾಡುತ್ತಾ

ಹೋಗಬೇಕು. ಹೀಗೆ ಧರ್ಮ ಸೇವೆ ಸಲ್ಲಿಸುವದಕ್ಕಾಗಿ ಇನಾಮು ಜಮೀನುಗಳನ್ನು ಉಪಭೋಗ ಮಾಡುತ್ತಾ ಹೋಗಬೇಕು. ಈ ಇನಾಮು ಜಮೀನುಗಳು ಎಲ್ಲಿಯವರೆಗೆ ಇನಾಮು ಪಡೆದಂಥವನ ಅಥವಾ ಅವನ ವಾರಸದಾರರು ಬ್ರಿಟಿಶರ ಸರಕಾರಕ್ಕೆ ವಿಧೇಯರಾಗಿ ಇರುತ್ತಾರೆಯೋ ಅಲ್ಲಿಯವರೆಗೆ ಅವಿಚ್ಛಿನ್ನವಾಗಿ ವಂಶಪರಂಪರೆ ನಡೆಯತಕ್ಕದ್ದು. ಸದ್ರಿ ಇನಾಮು ಜಮೀನುಗಳನ್ನು ಪರಾಧೀನ ಮಾಡತಕ್ಕದ್ದಲ್ಲ. ಹೀಗೆ ಇನಾಮು ಜಮೀನುಗಳ ಬಗ್ಗೆ ಹಾಕಿಕೊಟ್ಟ ಸನದುಗಳಲ್ಲಿ ಕರಾರು ಹಾಕಲ್ಪಟ್ಟದ್ದು ಇರತ್ತದೆ. ಈ ಪ್ರಕಾರವಾಗಿ ಎಷ್ಟೋ ಮಠಾಧಿಕಾರಿಗಳಿಗೆ, ಮುಲ್ಲಾ ಜನರಿಗೆ ಸನದುಗಳನ್ನು ಹಾಕಿಕೊಟ್ಟದ್ದುಂಟು. ಹೀಗೆ ಸರ್ವಿಸು ಇನಾಮು ಇದ್ದ ಮಠಗಳು ಅಥವಾ ಮಸೀದೆಗಳು ಸಾರ್ವಜನಿಕ ಆಸ್ತಿಗಳೋ ಅಥವಾ ಖಾಸಗಿ ಆಸ್ತಿಗಳೋ ಎಂಬ ಪ್ರಶ್ನೆಯು ಉದ್ಭವವಾಗುತ್ತದೆ.

ಹೀಗೆ ಮಠಗಳಿಗೆ ಅಥವಾ ಮಠದ ಅಧಿಕಾರಿಗಳ ಹೆಸರಿಲೆ ಇದ್ದ ಸನದುಗಳು ಗ್ರಾಮಚಾಕರಿ ರೈತ ಉಪಯೋಗಿ ಜಮೀನುಗಳ ಸನದುಗಳಾಗುತ್ತವೆ. ಸರಕಾರದ ಉದ್ದೇಶವು ಯಾವದಾದರೊಂದು ಮಠದ ಜಂಗಮರಾಗಲಿ ಅಥವಾ ಮಸೀದೆಯ ಮುಲ್ಲಾ ಅವರು ಆಗಲಿ, ಅವರ ಅನುಯಾಯಿಗಳು ಅವರನ್ನು ತಮ್ಮ ಮನೆಯೊಳಗಿನ ಧರ್ಮ ಕಾರ್ಯಗಳನ್ನು ಪೂರೈಸಿ ಕೊಡತಕ್ಕದ್ದು. ಹೀಗೆ ಜಂಗಮ, ಜೋಶಿ, ಖಾಜಿ, ಅಥವಾ ಮುಲ್ಲಾ ಇವರು ಧರ್ಮಕಾರ್ಯ ಮಾಡಿದರೆ ಅವರಿಗೆ ಈ ಸೇವೆಗಾಗಿ ಹಾಕಿಕೊಟ್ಟ ಜಮೀನದ ಹಸ್ತೆಯಲ್ಲಿ ಕೆಲವು ಭಾಗವನ್ನು ಸೂಟಬಿಟ್ಟು ಉಳಿದ ಸ್ವಲ್ಪ ಭಾಗವನ್ನು ಸರಕಾರಕ್ಕೆ ಕೊಡಬೇಕು. ಹೀಗೆ ಸರಿಯಾಗಿ ಧರ್ಮಕಾರ್ಯ ಮಾಡುತ್ತಾ ಸರಕಾರದ ಆಜ್ಞಾಧಾರಕನಾಗಿ ಹೋದರೆ ಅವರ ಘರಾಣೇಕ್ಕೆ ವಂಶ ಪರಂಪರೆ ನಡೆಯುವದು. ಒಂದು ವೇಳೆ ಇನಾಮು ಪಡೆದವರು ಅಥವಾ ಅವನ ವಂಶದವರು ಧರ್ಮ ಸೇವೆ ಮಾಡಲಿಲ್ಲವೆಂದು ತಿಳಿಯೋಣ ಆಗ್ಗೆ ಸದ್ರಿ ಇನಾಮು ಜಮೀನನ್ನು ಬಿಡಿಸಿಕೊಳ್ಳುವ ಹಕ್ಕು ಸರಕಾರಕ್ಕೆ ಇರುವುದೇ ಅದರೆ ಸದ್ರಿ ಜಮೀನುಗಳ ಮೇಲೆ ಸಂಪೂರ್ಣ ಹಸ್ತೆ ವಸೂಲ ಮಾಡಬಹುದು. ಅಥವಾ ಸನದು ಪಡಕೊಂಡವನು ಅಥವಾ ಅವನ ಮಕ್ಕಳು ಮೊಮ್ಮಕ್ಕಳು ಸದ್ರಿ ಇನಾಂ ಜಮೀನನ್ನು ಪರಾಧೀನ ಮಾಡಿದರೆ ಯಾವನು ಖರೀದಿ ಹಿಡಿದಿರುತ್ತಾನೆಯೋ ಅಂಥವನ

ಕಡೆಯಿಂದ ಸಂಪೂರ್ಣ ಹಸ್ತೆ ಹಣ ವಸೂಲ ಮಾಡಬಹುದು. ೧೯೫೨ನೇ ಇಸ್ವಿಗಿಗನೇ ಆ್ಯಕ್ಟದ ಪ್ರಕಾರ ಸರಕಾರಕ್ಕೆ ದಾನಆಸ್ತಿಯನ್ನು ಪರತ ತೆಗೆದುಕೊಳ್ಳುವ ಅಧಿಕಾರ ಇರುವದಿಲ್ಲ. ಆದ್ದರಿಂದ ಇಂಥ ಸರ್ವಿಸ ಇನಾಮು ಆಸ್ತಿಗಳು ಸೇವೆ ಸಲ್ಲಿಸಲಿಕ್ಕೆ ಕೊಟ್ಟಿದ್ದರಿಂದ ಅವು ಸಾರ್ವಜನಿಕ ಟ್ರಸ್ಟು ಆಸ್ತಿಗಳಾಗಲಾರವೆಂದು ನನ್ನ ಮತ.

## ಧರ್ಮಾರ್ಥ ವಿಭಾಗ

ಈ ಕಾಯದೆಯ ೯ ನೇ ಕಲ್ಮಿನ ಮೇರೆಗೆ ಧರ್ಮಾರ್ಥ ಉದ್ದೇಶಗಳಲ್ಲಿ ಕೆಲವೊಂದನ್ನು ಉದಾಹರಿಸಿದ್ದಾಗಿದೆ.

೧) ಬಡತನ ಅಥವಾ ಸಂಕಟ ಪರಿಹಾರ.

೨) ಶಿಕ್ಷಣ.

೩) ಔಷದೋಪಚಾರ.

೪) ಯಾವದೇ ಸಾರ್ವಜನಿಕ ಉಪಯೋಗದ ಉದ್ದೇಶಗಳ ಪ್ರಗತಿ,

ಮೇಲ್ಕಾಣಿಸಿದ ಉದ್ದೇಶಗಳನ್ನು ಒಳಗೊಂಡು ಸ್ಥಾಪಿಸಲ್ಪಟ್ಟ ಯಾವದೇ ಸಂಘ ಅಥವಾ ಸಂಸ್ಥೆಯು ಈ ಸಾರ್ವಜನಿಕ ಜಿಮ್ಮೆ ಕಾಯದೇ ಕ್ಷೇತ್ರದಲ್ಲಿ ಬರುತ್ತದೆ. ಇಂಥ ಸಂಘ ಅಥವಾ ಸಂಸ್ಥೆಯು ದೇಣಿಗೆ, ವರ್ಗಣಿ, ವರ್ಷಾಸನ, ಮಾಸಾಶನ, ಕಾಣಿಕೆ ಮುಂತಾದ ರೀತಿಗಳಿಂದ ಬಂದ ಹಣದಿಂದ ಪೋಷಿಸಲ್ಪಡುತ್ತಿದ್ದು ಅದರ ಸಂಚಾಲಕರು ಅಥವಾ ಜಿಮ್ಮೆದಾರರು ಆಡಳಿತೆಯ ಹೊಣೆ ಹೊತ್ತು ಕೆಲ್ಸ ನಡೆಸುತ್ತಿರುತ್ತಾರೆ. ವಿಶ್ವಸ್ಥ ರೀತಿಯಿಂದ ಸ್ವೀಕರಿಸಲ್ಪಟ್ಟ ಅಂಥ ಹಣದ ವ್ಯವಸ್ಥೆಯ ಬಗ್ಗೆ ಅವರು ಹೊಣೆಗಾರರಿರುತ್ತಾರೆ. ಕೆಲವು ಕಡೆಗೆ ಬರಗಾಲ ಪರಿಹಾರ ಕಮೀಟಿಯೆಂದು ಸ್ಥಾಪನೆಮಾಡಿ ದಾತೃಗಳ ಕಡೆಯಿಂದ ಹಣವನ್ನು ಧಾನ್ಯವನ್ನು ಸಂಗ್ರಹಿಸಿ ಅನೇಕ ಬಡ ಕೂಲಿಕಾರರನ್ನು ಕೆಲಸಕ್ಕೆ ಹಚ್ಚುವದುಂಟು. ಇಂಥ ಸಂಸ್ಥೆಗಳು ಮತ್ತು ಇದೇ ಸ್ವರೂಪದ ಬೇರೆ ಸಂಸ್ಥೆಗಳು ಧರ್ಮಾರ್ಥ ವಿಭಾಗದಲ್ಲಿ ಬರುತ್ತಿದ್ದು ಸಾರ್ವಜನಿಕ ಜಿಮ್ಮೆ ಆಸ್ತಿಗಳಾಗುತ್ತವೆ.

ಶಿಕ್ಷಣ ಪ್ರಸರಣ ಕಾರ್ಯಕ್ಕಾಗಿ ಅಲ್ಲಲ್ಲಿ ಅನೇಕ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿರುತ್ತವೆ. ಶಿಕ್ಷಣವಲ್ಲಿ ಧಾರ್ಮಿಕ, ಸಾಮಾಜಿಕ, ಲೌಕಿಕ, ಆಧ್ಯಾತ್ಮಿಕ ಮುಂತಾದ ಬೇರೆ ಬೇರೆ ಪ್ರಕಾರದ ವಿಭಾಗಗಳು ಇರುತ್ತವೆ. ಈ ಕಾಯದೆಯ ೯ ನೇ ಕಲಮಿನ (ಬ) ಕ್ಲಾಜಿನ ಮೇರೆಗೆ ಕೇವಲ ಧಾರ್ಮಿಕ ಶಿಕ್ಷಣಕ್ಕಾಗಿದ್ದ ಉದ್ದೇಶವು ಧರ್ಮಾರ್ಥ ವಿಭಾಗದಲ್ಲಿ ಬರುವದಿಲ್ಲ. ಉಳಿದ ಯಾವದೇ ಪ್ರಕಾರದ ಶಿಕ್ಷಣ ಸಂಸ್ಥೆಯು ಧರ್ಮಾರ್ಥ ವಿಭಾಗದಲ್ಲಿ ಬರುತ್ತದೆಂದು ಅರ್ಥವಾಗುತ್ತದೆ. ಕೆಲವು ಶಿಕ್ಷಣ ಸಂಸ್ಥೆಗಳು ಕೇವಲ ದಾತೃಗಳ ದೇಣಿಗೆ ಹಣದಿಂದ ನಡೆಯುತ್ತವೆ. ಸಂಸ್ಥೆಗಳ ಸದಸ್ಯರು ಅಥವಾ ಅಧಿಕಾರಿಗಳು ಬೇರೆ ಬೇರೆ ಕಡೆಗೆ ಸಂಚರಿಸಿ ವಿದ್ಯಾ ಪ್ರಸಾರಕ್ಕಾಗಿ "ಇಂಥ ಸಂಸ್ಥೆಯು ಸ್ಥಾಪಿಸಲ್ಪಟ್ಟಿದೆ ಅದಕ್ಕೆ ಧನ ಸಹಾಯಮಾಡಿರಿ" ಎಂದು ದಾತೃಗಳಿಗೆ ತಿಳಿಸಿ ಹಣವನ್ನು ಸಂಗ್ರಹಿಸುತ್ತಾರೆ. ಈ ಹಣವನ್ನು ಸಂಸ್ಥೆಯಿಂದ ಸ್ಥಾಪಿಸಲ್ಪಟ್ಟ ಶಾಲೆ, ಮತ್ತು ವಿದ್ಯಾಪೀಠಗಳಿಗೆ ಉಪಯೋಗ ಮಾಡುತ್ತಾರೆ. ಇಂಥ ಶಾಲೆ ಮತ್ತು ವಿದ್ಯಾ ಕೇಂದ್ರಗಳಲ್ಲಿ ಕಲಿಯತಕ್ಕ ವಿದ್ಯಾರ್ಥಿಗಳಿಂದ ಫೀ ಹಣವನ್ನು ಪಡೆಯುತ್ತಾರೆ. ಮತ್ತು ಶಿಕ್ಷಕ ಮತ್ತು ಪ್ರಾದ್ಯಾಪಕ ವರ್ಗಕ್ಕೆ ಸಂಬಳವನ್ನು ಕೊಡುತ್ತಾರೆ. ಈಗ ಸಂಸ್ಥೆಯು ಸಾರ್ವಜನಿಕರಿಂದ ದೇಣಿಗೆಯಾಗಿ ಪಡಕೊಂಡ ಹಣ ಮತ್ತು ವಿದ್ಯಾರ್ಥಿಗಳ ಫೀ ಹಣ ಕೂಡಿ ವಿದ್ಯಾ ಪ್ರಸರಣದ ವೆಚ್ಚವು ಸಾಗುತ್ತಿರುತ್ತಿರುವದರಿಂದ ಅಂಥ ಸಂಸ್ಥೆಯು ಸಾರ್ವಜನಿಕ ಸಂಸ್ಥೆಯಾಗುವದೇ ಎಂಬ ಪ್ರಶ್ನೆಯು ಉದ್ಭವಿಸುತ್ತದೆ.

ಈ ಕಾಯದೆಯ ೨ನೇ ಕಲ್ಮ (೧೩) ಕ್ಲಾಜಿನ ಮೇರೆಗೆ ಯಾವದೇ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ನಡೆಸಲ್ಪಟ್ಟ ಸಂಸ್ಥೆಯು ಮತ್ತು ೧೮೬೦ ನೇ ಸೊಸಾಯಿಟಿ ರಜಿಸ್ಟ್ರೇಶನ್ ಕಾಯದೆ ಮೇರೆಗೆ ನೋಂದಣಿ ಆದದ್ದು ಇದ್ದರೆ ಅದು ಸಾರ್ವಜನಿಕ ಜಿಮ್ಮೆಯೆಂದು ತಿಳಿಯಬೇಕು. ಶಿಕ್ಷಣವು ಧರ್ಮಾರ್ಥ ಉದ್ದೇಶದ ಕಕ್ಷೆಯಲ್ಲಿ ಬರುವದರಿಂದ ಇಂಥ ಧರ್ಮಾರ್ಥ ಉದ್ದೇಶವನ್ನು ಸಾಧಿಸಲಿಕ್ಕೆ ಒಂದು ಸಂಸ್ಥೆಯು ಸ್ಥಾಪಿಸಲ್ಪಟ್ಟರೆ ಅದು ಸಾರ್ವಜನಿಕ ಜಿಮ್ಮೆಯಾಗುವದು ಆದರೆ ಮುಂಬಯಿ ಗೋಖಲೆ ಶಿಕ್ಷಣ ಸಮಿತಿಯ ಸೆಕ್ರೆಟರಿಯಾದ ಶ್ರೀ ಜಿ. ವ್ಹಿ. ಗಾಡ

ಗೀಳರು, ಇಂಥ ಶಿಕ್ಷಣ ಸಂಸ್ಥೆಗಳು ಈ ಕಾಯುದೆಯು ೯ ನೇ ಕಲ್ಮಿನಲ್ಲಿ ಬರುವದಿಲ್ಲವೆಂದು ತಮ್ಮ ಅಭಿಪ್ರಾಯವನ್ನು ಪ್ರಕಟಿಸಿದ್ದಾರೆ. ಈ ವಿಷಯವು ಸಾಧಕ ಬಾಧಕ ಸಂದರ್ಭಗಳ ವಿಮರ್ಶನೆಯಿಂದ ನ್ಯಾಯಾಲಯದಲ್ಲಿ ನಿರ್ಣಯವಾಗುವದು ಒಳಿತು.

ಬಡವರು ಬೇನೆಯಿಂದ ಬಳಲುತ್ತಿರುವದನ್ನು ಕಂಡು ಮತ್ತು ಬಡ ಹುಡುಗರು ವಿದ್ಯಾ ವಿಹೀನರಾಗುವದನ್ನು ನೋಡಿ ಎಷ್ಟೋ ಉದಾರ ಹೃದಯಿಗಳು ದಾನಧರ್ಮ ಮಾಡುವದುಂಟು ಮತ್ತು ತಮ್ಮ ಹಣದಿಂದ ಸಂಸ್ಥೆಗಳನ್ನು ಸ್ಥಾಪಿಸುವದುಂಟು, ಎಷ್ಟೋ ಶಿಕ್ಷಣ ಸಂಸ್ಥೆಗಳು ಮತ್ತು ದಾವಾಖಾನೆಗಳಲ್ಲಿ ರೋಗಿಗಳು ಔಷದೋಪಚಾರ ಮಾಡಿಕೊಂಡಾಗ್ಗೆ ಅವರ ಕಡೆಯಿಂದ ಪ್ರತಿದಿನ್ನ ವೆಚ್ಚದ ಹಣವನ್ನು ಕೆಲವು ಹಣವನ್ನು ವಸೂಲ ಮಾಡಿದರೆ ಮತ್ತು ದವಾಖಾನೆ ನಡಿಸುವವರನ್ನು, ವೈದ್ಯರನ್ನು, ಬೇರೆ ನೌಕರದಳವನ್ನು ಸಂಬಳದಿಂದ ನೇಮಿಸಿಕೊಂಡಾಕ್ಷಣಕ್ಕೆ ಅದು ಖಾಸಗಿ ಸಂಸ್ಥೆಯಾಗಲಾರದು.

ಮೂಲ ಉದ್ದೇಶವು ಧರ್ಮಾರ್ಥವಿದ್ದು ಅದನ್ನು ನಡಿಸಲಿಕ್ಕೆ ದಾನದ ಹಣವು ಸಂಗ್ರಹಿಸಲ್ಪಟ್ಟಿದ್ದು ಅದರ ಸಹಾಯಾರ್ಥವಾಗಿ ಹೆಚ್ಚಿನ ಹಣವನ್ನು ವಿದ್ಯಾರ್ಥಿಗಳಿಂದ ಅಥವಾ ರೋಗಿಗಳಿಂದ ಪಡೆಯಲಾಗುವದು. ಅದ್ದರಿಂದ ಅಂಥ ಶಿಕ್ಷಣ ಮತ್ತು ಧರ್ಮಾರ್ಥ ದವಾಖಾನೆಗಳನ್ನು ನಡಿಸತಕ್ಕ ಸಂಸ್ಥೆಗಳು ಸಾರ್ವಜನಿಕ ಜವ್ಮೆ ಕ್ಷೇತ್ರನಲ್ಲಿ ಬರುವವು.

## ಈ ಕಾಯದೆಯಲ್ಲಿ ನೆನಪಿನಲ್ಲಿಡತಕ್ಕ ಮುಖ್ಯಾಂಶಗಳು

### ( ಸಾರ್ವಜನಿಕ ಜವ್ಮೆ ಕಾಯದೆಯ ಸಂಕ್ಷಿಪ್ತ ಪರಿಚಯ )

(೧) ಮುಂಬೈ ರಾಜ್ಯದಲ್ಲಿ ಸಾರ್ವಜನಿಕ ಧಾರ್ಮಿಕ ಮತ್ತು ಧರ್ಮಾರ್ಥ ಜವ್ಮೆ [ವಿಶ್ವಸ್ಥ] ಆಸ್ತಿಗಳ ಆಡಳಿತೆಯನ್ನು ಸುವ್ಯವಸ್ಥಿತ ರೀತಿಯಿಂದ ನಡಿಸುವಂತೆ ನೋಡಿಕೊಳ್ಳುವದು ಈ ಕಾಯದೆಯ ಉದ್ದೇಶವಾಗಿದೆ.

(೨) ಈ ಕಾಯದೆಯು ಖಾಸಗಿ ಜಿಮ್ಮೆಗಳಿಗೆ ಅಥವಾ ವಿಶ್ವಸ್ಥ ಆಸ್ತಿಗಳಿಗೆ ಅನ್ವಯಿಸುವದಿಲ್ಲ.

(೩.) ಶ್ರೀ. ಎ. ಘೋಷ ಇವರು ತಮ್ಮ "ಲಾ ಆಫ್ ಎಂಡೋಮೆಂಟ (ಧಾರ್ಮಿಕ ಉಂಬಳಿ ಕಾಯದೆ) ಗ್ರಂಥದಲ್ಲಿ ಬರೆದಂತೆ ಕ್ರಿಸ್ತಶಕಕ್ಕಿಂತಲೂ ೩೦೦ ವರ್ಷ ಪೂರ್ವದಲ್ಲಿ ಅಶೋಕಮಹಾರಾಜನ ಕಾಲದಿಂದ ಸಾರ್ವಜನಿಕ ಧಾರ್ಮಿಕ ಉಂಬಳಿ ಆಸ್ತಿಗಳ ಮೇಲೆ ಸರಕಾರದ ನಿರ್ಬಂದನೆ ಇತ್ತೆಂದು ಹೇಳಲಿಕ್ಕೆ ತಕ್ಕ ಆಧಾರಗಳಿವೆ. ತದನಂತರ ಮರಾಠಾ ರಾಜಮನೆತನದವರು ಮತ್ತು ಪೇಶ್ವಾಯಿಯವರು ನಿರ್ಬಂದನೆಯನ್ನು ಹಾಕಿ ದೇವಾಲಯಗಳಲ್ಲಿ ಪ್ರತಿನಿತ್ಯ ಅಥವಾ ಸಮಾರಂಭ ಸಮಯದಲ್ಲಿ ಪೂಜೆಗಾಗಿ ಎಷ್ಟು ವಸ್ತು ವಡವೆಗಳನ್ನು ಉಪಯೋಗಿಸಬೇಕೆಂಬುದನ್ನು ನಿರ್ದಿಷ್ಟಗೊಳಿಸುತ್ತಿದ್ದರು. ನಂತರ ಬ್ರಿಟಿಶರ ಆಳಿಕೆಯಲ್ಲಿ ಮೊಟ್ಟಮೊದಲು ೧೮೧೦ ನೇ ಇಸ್ವಿಯಲ್ಲಿ ೧೯ನೇ ರೆಗ್ಯುಲೇಶನ್ ಬಂಗಾಲ ಪ್ರಾಂತಕ್ಕೆ ಅನ್ವಯಿಸಲ್ಪಟ್ಟಿತು. ೧೮೧೭ ನೇ ಇಸ್ವಿಯ ೭ನೇ ರೆಗ್ಯುಲೇಶನ್ ಮದ್ರಾಸ ಇಲಾಖೆಗೂ ೧೮೨೭ ನೇ ರೆಗ್ಯುಲೇಶನ್ ಮುಂಬೈ ಪ್ರಾಂತಕ್ಕೂ ಅನ್ವಯಿಸಲ್ಪಟ್ಟಿತು. ಮುಂಬೈ ಪ್ರಾಂತದಲ್ಲಿಯ ಈ ರೆಗ್ಯುಲೇಶನ್‌ದಿಂದ ಜಿಲ್ಹಾ ಕಲೆಕ್ಟರರು ಧಾರ್ಮಿಕ ಉಂಬಳಿಗಳ ಯೋಗ್ಯ ವ್ಯವಸ್ಥೆಯಾಗುತ್ತದೆಂಬ ಬಗ್ಗೆ ಮೇಲ್ವಿಚಾರಣೆ ಮಾಡುತ್ತಿದ್ದರು. ಈ ವ್ಯವಸ್ಥೆಯಿಂದ ಆಡಳಿತೆಯು ಸರಿಯಾಗಿ ನಡೆಯದ್ದರಿಂದ ೧೮೬೩ ನೇ ಇಸ್ವಿಯಲ್ಲಿ ೨೦ ನೇ ನಂಬರಿನ ಧಾರ್ಮಿಕ ಉಂಬಳಿ ಕಾಯದೆಯನ್ನು ಮಾಡಿ ಅಲ್ಲಿಯವರೆಗೆ ರೆವಿನ್ಯು ಬೋರ್ಡಿನವರು ವಹಿಸಿದ್ದ ಅಧಿಕಾರವನ್ನು ಸರಕಾರದವರು ಆ ಕಾಯದೆ ಮೇರೆಗೆ ಕಮಿಟಿಗಳನ್ನು ನೇಮಿಸಿ ಅವುಗಳಿಗೆ ಒಪ್ಪಿಸಿದರು. ಈ ಪ್ರಕಾರವಾಗಿ ನೇಮಿಸಿದ ಜಿಮ್ಮೆದಾರರ ಕಮಿಟಿಯ ಆಡಳಿತೆಯ ಬಗ್ಗೆ ದೂರು ಏನಾದರೂ ಇದ್ದರೆ ಅಧಿಕಾರವುಳ್ಳ ಕೋರ್ಟಿನಲ್ಲಿ ಮಂದಿರದ ಭಕ್ತರಿಗೆ ದಾವೆ ಮಾಡುವ ಅಧಿಕಾರವು ಕೂಡ ಕೊಡಲ್ಪಟ್ಟಿತು. ಮೊಟ್ಟಮೊದಲು ಈ ಕಾಯದೆಯು ಮದ್ರಾಸ ಮತ್ತು ಬಂಗಾಲ ಪ್ರಾಂತಗಳಿಗೆ ಅನ್ವಯಿಸಲ್ಪಟ್ಟಿದ್ದು ನಂತರ ೧೮೬೫ ನೇ ೭ನೇ ಕಾಯದೆ ಮೇರೆಗೆ ಮುಂಬೈ ಪ್ರಾಂತದಲ್ಲಿ ಉತ್ತರ ಕನ್ನಡ (ನಾರ್ಥ

ಕ್ಯಾನರಾ) ಜಿಲ್ಹೆಗೆ ಸಹ ಹಚ್ಚಲ್ಪಟ್ಟಿತು. ಈ ಪ್ರಕಾರದ ಯೋಜನೆಯಿಂದ ಸಮಾಧಾನಕಾರಕವಾದ ಆಡಳಿತೆಯು ಸಾಗದ್ದರಿಂದ ಸಿವಿಲ್ ಪ್ರೊಸಿಜರ ಕೋಡಿನ ೯೨ ಮತ್ತು ೯೩ ನೇ ಕಲ್ಮಗಳಿಂದ ಧಾರ್ಮಿಕ ಮತ್ತು ಧರ್ಮಾರ್ಥ ವಿಶ್ವಸ್ಥ ಆಸ್ತಿಗಳ ಬಗ್ಗೆ ತಕರಾರುಗಳು ಇದ್ದಲ್ಲಿ ಜಿಲ್ಹಾ ಕಲೆಕ್ಟರರ ಪರವಾನಗಿ ಪಡಕೊಂಡು ಕೋರ್ಟಿನಲ್ಲಿ ವ್ಯಾಜ್ಯ ಹೂಡಲಿಕ್ಕೆ ಮಠದ ಮತ್ತು ಮಂದಿರದ ಭಕ್ತರಿಗೆ ಅಧಿಕಾರ ಕೊಡಲ್ಪಟ್ಟಿತು.

೧೯೨೦ನೇ ಸಾಲಿನಲ್ಲಿ ಧಾರ್ಮಿಕ ಮತ್ತು ಧರ್ಮಾರ್ಥ ವಿಶ್ವಸ್ಥ ಆಸ್ತಿಗಳ ಕಾಯಿದೆ ಪಾಸಾದಂದಿನಿಂದ ಮಠ ಅಥವಾ ಮಂದಿರಗಳಿಗೆ ಸಂಬಂಧಪಟ್ಟವರು ಕೋರ್ಟಿನಲ್ಲಿ ದಾವೆ ಮಾಡಿ ಜಿಮ್ಮೆದಾರರ ಕಡೆಯಿಂದ ಲೆಖ್ಖವನ್ನು ಕೇಳುವ ಹಕ್ಕು ಪ್ರಾಪ್ತವಾಯಿತು. ೧೯೩೫ನೇ ಸಾಲಿನಲ್ಲಿ ಮುಂಬಯಿ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳನೋಂದಣಿ ಕಾಯಿದೆ (Bombay Public Trusts Registration Act 1935) ಅಮಲಿನಲ್ಲಿಬಂದಿತು. ಈ ಕಾಯದೆಯು ಹಿಂದೂ ಜನರಿಗೆ ಅನ್ವಯಿಸಲ್ಪಟ್ಟದ್ದು ವರ್ಷಕ್ಕೆ ೧೦೦೦ ರೂಪಾಯಿ ಉತ್ಪನ್ನಕ್ಕಿಂತ ಕಡಿಮೆ ಅಲ್ಲದಷ್ಟು ಆಸ್ತಿಇದ್ದ ಎಲ್ಲ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಿಗೆ ಅನ್ವಯಿಸಲ್ಪಟ್ಟಿತು. ಮುಂದೆ ೧೯೩೭ನೇ ಇಸ್ವಿ ಅಗಸ್ಟ ತಿಂಗಳಲ್ಲಿ ಜೈನ ಸಮಾಜಕ್ಕೆ ಸಹ ಅನ್ವಯಿಸಲ್ಪಟ್ಟಿತು. ಈ ಕಾಯದೆ ಮೇರೆಗೆ ಅಂಥ ವಿಶ್ವಸ್ಥ ಆಸ್ತಿಗಳ ನೋಂದಣೀ ಲೆಖ್ಖ ತಪಾಸಣೆ ಮತ್ತು ಲೆಖ್ಖಗಳನ್ನು ಸಾದರಪಡಿಸುವಧು ಮುಂತಾದ ಹೊಣೆಗಾರಿಕೆಯು ಜಿಮ್ಮೆದಾರರ ಮೇಲೆ ಇದ್ದಿತು. ಮುಂದೆ ೧೯೪೭ನೇ ಸಾಲಿನಲ್ಲಿ ಅಗಸ್ಟ ತಿಂಗಳಲ್ಲಿ ಮುಂಬಯಿ ಸರಕಾರದವರು ಮುಸಲ್ಮಾನ ವಾಕ್ಫ ಆ್ಯಕ್ಟ ಮತ್ತು ಪಾರ್ಸಿ ಪಬ್ಲಿಕ್ ಟ್ರಸ್ಟ ರಿಜಿಸ್ಟ್ರೇಶನ್ ಆ್ಯಕ್ಟ ಈ ಎರಡೂ ಕಾಯದೆಗಳಿಗೆ ಒಳಪಡದ ಎಲ್ಲ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಿಗೆ. ಈ ಕಾಯದೆಯನ್ನು ಅನ್ವಯಿಸಿದರು.

ಮೇಲೆ ಕಾಣಿಸಿದ ಮೇರೆಗೆ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ಆಡಳಿತೆಯ ಬಗ್ಗೆ ಬೇರೆ ಬೇರೆ ಕಾನೂನುಗಳು ಆಗಾಗ್ಗೆ ರಚಿಸಲ್ಪಟ್ಟಾಗ್ಯೂ ಅಷ್ಟು ತೃಪ್ತಿಕರವಾದ ಪರಿಣಾಮವಾಗಲಿಲ್ಲ. ತೆಂಡೂಲಕರ ಕಮಿಟಿಯವರು ಮುಂಬಯಿ ರಾಜ್ಯದಲ್ಲಿ ಮುಖ್ಯ ಭಾಗಗಳನ್ನು ಸಂದರ್ಶಿಸಿ ಅಲ್ಲಿಯ ಮಠ

ಮತ್ತು ಮಂದಿರಗಳ ಜಿಮ್ಮೆದಾರರ ಬಗ್ಗೆ ವಿಚಾರಣೆಯನ್ನು ನಡೆಸಿದಾಗ್ಗೆ ಸಮಾಧಾನಕರವಾದ ಪರಿಸ್ಥಿತಿಯು ಅವರ ದೃಷ್ಟಿ ಪಥಕ್ಕೆ ಬರಲಿಲ್ಲ. ಇದಲ್ಲದೆ ಈ ಕಮಿಟಿಯವರು ಸರ ಪುರುಷೋತ್ತಮದಾಸ ಠಾಕೂರದಾಸ, ಕುಮಾರಿ ಇಂದುಮತಿ ಚಿಮನಲಾಲ, ಶ್ರೀ ಕಾಕಾಸಾಹೇಬ ಕಾಲೇಲಕರ ಶ್ರೀ ಅಳಬಾಲ ವಕೀಲ ವಿಜಾಪೂರ ಶ್ರೀ ಆರ್. ಆರ್. ದಿವಾಕರ (ಈಗಿನ ಬಿಹಾರ ಗವ್ಹರ್ನರರು) ಶ್ರೀ ಕೆ. ಎಂ. ಮುನಸಿ ರಾಯಿಟ ಆನರೇಬಲ್ ಎಮ್. ಆರ್. ಜಯಕರ ಮೊದಲಾದ ಪ್ರತಿಷ್ಠಿತ ಜನರ ಹೇಳಿಕೆಯನ್ನು ತೆಗೆದುಕೊಂಡರು. ಸಾರ್ವಜನಿಕ ಜಿಮ್ಮೆ ಆಸ್ತಿಗಳ ಮೇಲೆ ಇನ್ನೂ ಹೆಚ್ಚಾಗಿ ಕಾಯಿದೆ ಒಡಿತವು ಬಲಪಡಬೇಕೆಂದು ಸಾಮಾನ್ಯವಾಗಿ ಎಲ್ಲ ವಿಚಾರವಂತರ ಅಭಿಪ್ರಾಯಗಳು ತಲೆದೋರಿದ್ದರಿಂದಲೂ ಮತ್ತು ಸುಮಾರು ೫೦೦ ಕೋಟಿ ರೂಪಾಯಿ ಬೆಲೆ ಬಾಳುವ ಮುಂಬಯಿ ರಾಜ್ಯದಲ್ಲಿಯ ಎಲ್ಲ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ಆಡಳಿತೆಯ ನಿರ್ಬಂಧನೆ ಮಾಡುವದು ಅಗತ್ಯವೆಂದು ತೋರಿದ್ದರಿಂದಲೂ ಮುಂಬಯಿ ರಾಜ್ಯದ ನ್ಯಾಯ ಶಾಸನ ಸಭೆಯವರು ಶ್ರೀ ತೆಂಡೂಲಕರ ಕಮಿಟಿಯ ವರದಿಯನ್ನು ಪೀಠಿಕೆಯಾಗಿಟ್ಟುಕೊಂಡು ಈ ಸಾರ್ವಜನಿಕ ಜಿಮ್ಮೆ ಕಾಯಿದೆಯನ್ನು ೧೯೫೦ನೇ ಇಸ್ವಿಯಲ್ಲಿ ಪಾಸುಮಾಡಿದರು.

ಈ ಸಾರ್ವಜನಿಕ ಜಿಮ್ಮೆ ಕಾಯದೆಯು ಜಾತಿ, ಮತ ಪಂಥಗಳ ಭೇದವಿಲ್ಲದೆ ಮುಂಬಯಿ ರಾಜ್ಯದ ಎಲ್ಲ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಿಗೆ ಅನ್ವಯಿಸುವದು.

ಸಾರ್ವಜನಿಕ ಜಿಮ್ಮೆ ಕಾಯದೇ ಮೇರೆಗೆ ಮುಂಬಯಿ ರಾಜ್ಯದ ಎಲ್ಲ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ಆಡಳಿತೆಯ ಮೇಲ್ವಿಚಾರಣೆ ಮತ್ತು ನಿರ್ಬಂಧನೆ ಮಾಡುವ ಕೊನೆಯ ಅಧಿಕಾರಿಯು ಚಾರಿಟಿ ಕಮಿಶನರರು ಇರುತ್ತಾರೆ. ಇವರ ಕಾರ್ಯಾಲಯವು (ಆಫೀಸು) ಮುಂಬಯಿಯಲ್ಲಿರುತ್ತದೆ. ಮುಂಬಯಿ ರಾಜ್ಯ ಸರಕಾರದವರು ಆಗಾಗ್ಗೆ ವಿಧಿಸುವ ನಿಯಮ ಮತ್ತು ಆಜ್ಞೆಗಳ ಮೇರೆಗೆ ಇವರು ಅಧಿಕಾರ ಸೂತ್ರನ್ನು ಇವರ ಕೆಳಗೆ ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರೆಂದು ರಾಜ್ಯ ಸರಕಾರದವರು ನೇಮಿಸಿರುತ್ತಾರೆ. ಮುಂಬಯಿ ರಾಜ್ಯದಲ್ಲಿ ಬೇರೆ ಬೇರೆ ಮಂಡಲ

ಗಳನ್ನು (Region) ನಿರ್ಮಿಸಿ ಒಂದೊಂದು ಮುಂಡಲಕ್ಕೆ ಒಬ್ಬ ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರನ್ನು ನೇಮಿಸಿದ್ದಾಗಿದೆ. ಮುಂಬಯಿ ರಾಜ್ಯದಲ್ಲಿ ಒಟ್ಟು ೬ ಮಂಡಲಗಳು ಇವೆ.

೧) **ಬೃಹನ್ಮುಂಬಯಿ:—** ಠಾಣಾ ಮತ್ತು ಕುಲಾಬಾ ಜಿಲ್ಲೆಗಳಲ್ಲದೆ ಇನ್ನಿತರ ಭಾಗಗಳು ಕೂಡಿದ್ದು ಅದೆ.

೨) **ಅಹಮ್ಮದಾಬಾದ:—** ಅಹಮ್ಮದಾಬಾದ, ಅಮ್ರೇಲಿ, ಮೆಹಸಾನಾ ಬನಸಕಂಠಾ ಮತ್ತು ಸಬರಕಂಠಾ ಜಿಲ್ಲೆಗಳು ಕೂಡಿದ್ದು.

೩) **ಬರೋಡಾ:—** ಬರೋಡಾ, ಕೈರಾ, ಪಂಚಮಹಾಲ, ಬ್ರೋಚ ಸುರತ ಮತ್ತು ಡಂಗ್ಸ.

೪) **ಪುಣಾ:—** ಪುಣಾ ಪೂರ್ವಖಾನದೇಶ ಪಶ್ಚಿಮ ಖಾನದೇಶ ನಾಸಿಕ, ಅಹಮ್ಮದನಗರ, ಸೊಲ್ಲಾಪೂರ ಜಿಲ್ಲೆಗಳು ಕೂಡಿದ್ದು.

೫) **ಕೊಲ್ಹಾಪೂರ:—** ಉತ್ತರ ಸತಾರಾ, ದಕ್ಷಿಣ ಸತಾರಾ, ರತ್ನಾಗಿರಿ, ಜಿಲ್ಲೆಗಳು ಕೂಡಿದ್ದು.

೬) **ಬೆಳಗಾವಿ:—** ಬೆಳಗಾವಿ, ಧಾರವಾಡ, ಕ್ಯಾನರಾ ಮತ್ತು ವಿಜಾಪೂರ, ಜಿಲ್ಲೆಗಳು ಕೂಡಿದ್ದು.

ಚಾರಿಟಿ ಕಮಿಶನರರಿಗೆ ಮತ್ತು ಅಸಿಸ್ಟಂಟ ಅಥವಾ ಡೆಪ್ಯೂಟಿ ಚಾರಿಟಿ (ಳನೇ ನಿಯಮ) ಕಮಿಶನರರಿಗೆ ತಮ್ಮ ಕೈಕೆಳಗೆ ನೌಕರದಾರ ಮತ್ತು ಇನ್ಸ್ಪೆಕ್ಟರರನ್ನು ನೇಮಿಸಿಕೊಳ್ಳುವ ಅಧಿಕಾರವನ್ನು ರಾಜ್ಯಸರಕಾರದವರು ಕೊಟ್ಟಿರುತ್ತಾರೆ.

ಪ್ರತಿಯೊಂದು ಮಂಡಲದ ಕ್ಷೇತ್ರದಲ್ಲಿದ್ದ ಸಾರ್ವಜನಿಕ ಜಿಮ್ಮೆ ಆಸ್ತಿಗಳ ಬಗ್ಗೆ ಬಂದ ಅರ್ಜಿಗಳನ್ನು ಆಯಾ ಮಂಡಲದ ಅಧಿಕಾರಿಗಳಾದ ಅಸಿಸ್ಟಂಟ ಅಥವಾ ಡೆಪ್ಯೂಟಿ ಚಾರಿಟಿ ಕಮಿಶನರರು ಕಲೆಹಾಕಿ ವಿಚಾರಣೆ ಬಗ್ಗೆ ಇಡುತ್ತಾರೆ. ಇಂಥ ವಿಚಾರಣೆಯು ಮೂರು ಜನ ಸಲಹೆಗಾರರು ( ಅಸೆಸರರು ) ಇವರ ಸಮಕ್ಷಮದಲ್ಲಿ ನಡೆಯುವದು. ಸಲಹೆಗಾರರು ಕೊಟ್ಟ ಅಭಿಪ್ರಾಯವನ್ನು ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನ

ರರು ತಮ್ಮ ಹುಕುಮಿನೊಡನೆ ಬರೆದುಕೊಳ್ಳುತ್ತಾರೆ. ಅಸಿಸ್ಟಂಟ ಚಾರಿಟಿ ಕಮಿಶನರು ಮಾಡಿದ ಹುಕುಮಿನ ವಿರುದ್ಧವಾಗಿ ಚಾರಿಟಿ ಕಮಿಶನರ ಕಡೆಗೆ ಅಪಿಲು ಮಾಡಬಹುದು. ಅಪೀಲುನಲ್ಲಿಯೂ ಸಹ ವಿ ರು ದ್ಧ ತೀರ್ಮಾನವಾದಲ್ಲಿ ಡಿಸ್ಟ್ರಿಕ್ಟ ಜಡ್ಜ ಕೋರ್ಟಿಗೆ ಅರ್ಜಿಮಾಡಿಕೊಳ್ಳಬ ಹುದು. ಇಂಥ ಅರ್ಜಿಯ ಕೊನೆಯ ತೀರ್ಮಾನವು ಮುಂಬಯಿ ಹಾಯ ಕೋರ್ಟಿನಲ್ಲಿ ಆಗುವದು.

ಅಸಿಸ್ಟಂಟ ಚಾರಿಟಿ ಕಮಿಶನರ ಕಡೆಗೆ ಅಥವಾ ಚಾರಿಟಿ ಕಮಿಶನರ ಕಡೆಗೆ ತೀರ್ಮಾನವಾಗತಕ್ಕ ವಿಷಯವೆಂದರೆ, ಯಾವದಾ ದರೊಂದು ಮಠ ಅಥವಾ ಮಂದಿರದ ಆಸ್ತಿಯಾಗಲಿ ಅಥವಾ ಬೇರೊಬ್ಬ ವ್ಯಕ್ತಿಯ ಆಸ್ತಿಯಾಗಲಿ ಸಾರ್ವಜನಿಕ ಜಿಮ್ಮೆ ಆಸ್ತಿಯು ಇರುತ್ತದೆಯೊ ಹೇಗೆ! ಸಾರ್ವಜನಿಕ ಟ್ರಸ್ಟ ಆಸ್ತಿಯೆಂದು ನಿರ್ಣಯಿಸಲ್ಪಟ್ಟ ಮೇಲೆ ಲೆಖ್ಖ ಪತ್ರಗಳನ್ನು ಸರಿಯಾಗಿ ಇಟ್ಟಿರುತ್ತಾರೆಯೊ ಹೇಗೆ! ಯಾವದಾದರು ವಿಶ್ವಸ್ಥ ಆಸ್ತಿಯು ಪರಾಧೀನವಾಗಿರುತ್ತದೆಯೊ ಹೇಗೆ ಇವೇ ಮುಂತಾದ ವಿಷಯಗಳ ಮೇಲೆ ವಿಚಾರಣೆಯಾಗುವದು.

ಒಟ್ಟಿನಮೇಲೆ ಸಾರ್ವಜನಿಕ ಜಿಮ್ಮೆ ಕಾಯದೆಯು ಸಂಕ್ಷಿಪ್ತವಾಗಿ ಕೆಳಗೆ ಕಾಣಿಸಿದ ತತ್ವಗಳನ್ನು ಒಳಗೊಂಡಿದ್ದಿರುತ್ತದೆ.

(೧) ಯಾವದಾದರೊಂದು ಮಠ, ಮಂದಿರ ಅಥವಾ ವಾಕ್ಫ ಆಸ್ತಿಯು ಸಾರ್ವಜನಿಕ ವಿಶ್ವಸ್ಥ ಆಸ್ತಿಯು ಇರುತ್ತದೆಯೋ!

(೨) ಒಂದು ವೇಳೆ ಸಾರ್ವಜನಿಕ ವಿಶ್ವಸ್ಥ ಆಸ್ತಿಯು ಇದ್ದರೆ ಅದನ್ನು ಈ ಕಾಯದೆಯ ಮೇರೆಗೆ ನೋಂದಣಿ ಮಾಡಿಸತಕ್ಕದ್ದು.

(೩) ಅಂಥ ಸಾರ್ವಜನಿಕ ಜಿಮ್ಮೆ ಆಸ್ತಿಯು ನೋಂದಣಿ ಆದ ಮೇಲೆ ಜಿಮ್ಮೆದಾರನು ಅದರ ಲೆಖ್ಖಪತ್ರವನ್ನು ಸರಿಯಾಗಿಡತಕ್ಕದ್ದು.

(೪) ಇಂಥ ಲೆಖ್ಖಪತ್ರಗಳನ್ನು ಕಾಯದೇ ಬದ್ಧವಾಗಿ ನೇಮಿಸಲ್ಪಟ್ಟ ಆಡಿಟರನು ತಪಾಸ ಮಾಡತಕ್ಕದ್ದು.

(೫) ಚಾರಿಟಿ ಕಮಿಶನರರು ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಬೇಕಾದಾಗ್ಗೆ ಈ ಲೆಖ್ಖಪತ್ರಗಳನ್ನು ಪರಿಶೀಲಿಸಬಹುದು ಮಠ ಮತ್ತು ಮಂದಿರದಲ್ಲಿಯ ರೀತಿ ಮತ್ತು ಪದ್ಧತಿಗೆ ವಿರೋಧವಾಗದಂತೆ ಮಠ ಮತ್ತು ಮಂದಿರಗಳಲ್ಲಿ ಪ್ರವೇಶ ಮಾಡಬಹುದು.

(೬) ಚಾರಿಟಿ ಕಮಿಶನರರು ಸಾರ್ವಜನಿಕ ವಿಶ್ವಸ್ಥ ಆಸ್ತಿಯ ನಿಧಿಯ ಆಡಳಿತೆಗಾರರು ಇರುತ್ತಾರೆ.

(೭) ಸಾರ್ವಜನಿಕ ವಿಶ್ವಸ್ಥ ಆಸ್ತಿಗೆ ಸಂಬಂಧಪಟ್ಟ ಯಾವದೇ ಜಿಮ್ಮೆದಾರನು ಜಿಮ್ಮೆ ಆಸ್ತಿಯ ವ್ಯವಸ್ಥೆ ಮಾಡದೆ ತೀರಿಕೊಂಡರೆ ಅಥವಾ ಜಿಮ್ಮೆದಾರನಾಗಲಿಕ್ಕೆ ಅಲ್ಲಗಳೆದರೆ ಅಥವಾ ನಾದಾರಿಯಾದರೆ ಇವೇ ಮುಂತಾದ ಕಾರಣಗಳ ಸಲುವಾಗಿ ಅಧಿಕಾರವುಳ್ಳ ಕೋರ್ಟಿನಲ್ಲಿ ಯೋಗ್ಯ ನ್ಯಾಯಾಶ್ರಯ ಪಡೆಯಲು ಅರ್ಜಿ ಮಾಡಿಕೊಳ್ಳಬಹುದು.

(೮) ಯಾರಾವರೂ ತಮ್ಮ ಆಸ್ತಿಯನ್ನು ಸಾರ್ವಜನಿಕ ಜಿಮ್ಮೆಯೆಂದು ಮಾರ್ಪಡಿಸಬೇಕೆಂದು ಇಚ್ಛಿಪಟ್ಟಲ್ಲಿ, ಚಾರಿಟಿ ಕಮಿಶನರರನ್ನು ಜಿಮ್ಮೆದಾರರನ್ನಾಗಿ ನೇಮಿಸಿ ಅವರ ಕಡೆಗೆ ತಮ್ಮ ಆಸ್ತಿಯನ್ನು ಒಪ್ಪಿಸಬಹುದು.

(೯) ಸಾರ್ವಜನಿಕ ಜಿಮ್ಮೆ ಆಡಳಿತೆಯನಿಧಿಯನ್ನು ನಿರ್ಮಿಸಲ್ಪಟ್ಟಿದ್ದು ಮುಂಬಯಿ ರಾಜ್ಯ ಸರಕಾರದ ಆಜ್ಞೆಯ ಮೇರೆಗೆ ಅದರ ಆಡಳಿತೆಯು ಜರಗತಕ್ಕದ್ದು.

(೧೦) ಡೆಪ್ಯೂಟಿ ಅಥವಾ ಅಸಿಸ್ಟಂಟಿ ಚಾರಿಟಿ ಕಮಿಶನರರು ಸಲಹೆಗಾರರ (ಅಸೆಸರರ) ಯಾದಿಯನ್ನು ರಚಿಸಿದ ಮೇಲೆ ಚಾರಿಟಿ ಕಮಿಶನರರ ಮಂಜೂರಿಯಿಂದ ಅದು ಸರಕಾರಿ ಗ್ಯಾಜೆಟ್ಟಿನಲ್ಲಿ ಪ್ರಸಿದ್ಧಿಸಲ್ಪಡುವದು. ಈ ಸಲಹೆಗಾರರು ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಮಾಡಬಹುದಾದ ವಿಚಾರಣೆಯಲ್ಲಿ ಭಾಗವಹಿಸಿ ಅಭಿಪ್ರಾಯ ವ್ಯಕ್ತ ಮಾಡುವ ಅಧಿಕಾರವುಂಟು.

(೧೧) ಸಾರ್ವಜನಿಕ ಜಿಮ್ಮೆದಾರನು ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ಕಡೆಗೆ ಜಿಮ್ಮೆ ಬಗ್ಗೆ ಅರ್ಜಿಮಾಡದಿದ್ದರೆ ಅಥವಾ ಜಿಮ್ಮೆಯಲ್ಲಿ ಸ್ಥಿತ್ಯಂತರವಾದಬಗ್ಗೆ ತಿಳಿಸದಿದ್ದರೆ, ಲೆಖ್ಖಪತ್ರಗಳನ್ನು ಇಡದಿದ್ದರೆ ಇವೇ ಮೊದಲಾದ ಕಾರಣಗಳಿಗಾಗಿ ಸಾರ್ವಜನಿಕ ಜಿಮ್ಮೆದಾರನು ಅಪರಾಧಿಯಾಗುವನು ಪರಮಾವಧಿ ಶಿಕ್ಷೆಯು ೧೦೦೦ ರೂಪಾಯಿಗಳವರೆಗೆ ದಂಡವಿಧಿಸಲ್ಪಡುವದಿರುತ್ತದೆ.

(೧೨) ಚಾರಿಟಿಕಮಿಶನರರು ಅಪೀಲ ವಿಚಾರಣೆಮಾಡುವ ಅಧಿಕಾರಿಯು ಇರುತ್ತಾರೆ. ತಮ್ಮ ಖಾತೆಯ ಆ ಡ ಳಿ ತೆ ಯ ಮೇಲ್ವಿಚಾರಣೆ ಮಾಡುವ ಅಧಿಕಾರವಿದೆ. ಇವಲ್ಲದೆ ಬೇರೆ ಅಧಿಕಾರಗಳು ಅವರಿಗೆ ಕೊಡಲ್ಪಟ್ಟಿವೆ.

(೧೩) ಈ ಕಾಯದೆ ಮೇರೆಗೆ ನೇಮಿಸಲ್ಪಟ್ಟ ಅ ಧಿ ಕಾ ರಿ ಗ ಳು ವಿಚಾರಮಾಡುವ ವಿಷಯದ ಬಗ್ಗೆ ಯಾವ ದಿವಾಣಿಕೋರ್ಟಿಗೂ ವಿಚಾರ ಮಾಡುವ ಅಧಿಕಾರವಿರುವದಿಲ್ಲ.

(೧೪) ಯಾವದಾದರೊಂದು ಆಸ್ತಿಯು ಸಾರ್ವಜನಿಕ ಜಿಮ್ಮೆ ಆಸ್ತಿಯು ಇರುವದೋ ಹೇಗೆ ಎಂಬ ಬಗ್ಗೆ ಮತ್ತು ಬೇರೆ ಕಾರಣಗಳ ಬಗ್ಗೆ ಸಂಬಂಧಪಟ್ಟವರು ದಿವಾಣಿಕೋರ್ಟಿನಲ್ಲಿ ಅರ್ಜಿ ಮಾಡಿಕೊಳ್ಳಬಹುದು. ದಿವಾಣಿಕೋರ್ಟಿನ ಹುಕುಂ ತಮಗೆ ವಿರುದ್ಧವಾದಲ್ಲಿ ಆ ಹುಕುಮಿನ ಮೇಲೆ ಮುಂಬಯಿ ಹಾಯಕೋರ್ಟಿಗೆ ಅಪೀಲುಮಾಡಿಕೊಳ್ಳಬಹುದು.



# ಸಾರ್ವಜನಿಕ ಜಿಮ್ಮೆ ಕಾಯುದೆಯ

## ಸಂಕ್ಷಿಪ್ತ ಅನುವಾದ

### ಭಾಗ (೨)

ಈ ಕಾಯದೆಯಲ್ಲಿ ಹನ್ನೆರಡು ಪ್ರಕರಣಗಳು ಇರುತ್ತವೆ.

### ೧ ನೇಯ. ಪ್ರಕರಣ

ಈ ಪ್ರಕರಣದಲ್ಲಿ ಎರಡು ಕಲಮುಗಳು ಅವೆ.

**೧ ನೇ ಕಲಮು:**— ಈ ಕಾಯದೆಯು ೧೯೫೦ ನೇ ಸಾಲಿನ ಸಾರ್ವಜನಿಕ ಜಿಮ್ಮೆ ಕಾಯದೆ ಎಂದು ಕರೆಯಲ್ಪಟ್ಟಿದ್ದು ಇಡೀ ಮುಂಬಯಿ ರಾಜ್ಯಕ್ಕೆ ಅನ್ವಯಿಸುವದು.

ಈ ಕಾಯದೆಯು ಕೂಡಲೇ ಅಮಲಿನಲ್ಲಿ ಬರುವದು. ಆದರೆ ಈ ಕಾಯದೆಯಲ್ಲಿಯ ಕಲಮುಗಳು ಸರಕಾರಿ ಪ್ರಕಟನೆಯ ಮೇರೆಗೆ ನಿರ್ದಿಷ್ಟಪಡಿಸಿದ ತಾರೀಖಿನಿಂದ ಸಾರ್ವಜನಿಕ ಜಿಮ್ಮೆ ಆಸ್ತಿಗಳಿಗೆ ಅನ್ವಯಿಸುವವು.

(೨) ಈ ಕಾಯದೆಯಲ್ಲಿ ಉಪಯೋಗಿಸಿದ ಶಬ್ದಗಳು. 'ಅಸೆಸರ' ಅಥವಾ ಸಲಹೆಗಾರರು ೭ ನೇ ಕಲಮಿನ ಪ್ರಕಾರ ನೇಮಿಸಲ್ಪಟ್ಟವರಿರುತ್ತಾರೆ.

ಚಾರಿಟಿ ಕಮಿಶನರ ಅಸಿಸ್ಟಂಟ ಚಾರಿಟಿ ಕಮೀಶನರ ಮತ್ತು ಡೆಪ್ಯುಟಿ ಕಮೀಶನರರು ಈ ಕಾಯದೆ ಮೇರೆಗೆ ನೇಮಿಸಲ್ಪಟ್ಟಿದ್ದಾರೆ.

**ಕೋರ್ಟ** ಅಂದರೆ:— ಬೃಹನ್ಮುಂಬಯಿ ಪಟ್ಟಣದಲ್ಲಿ ಸಿಟಿ ಸಿವಿಲ್ ಕೋರ್ಟ ಮತ್ತು ಬೇರೆ ಕಡೆಗೆ ( ಡಿಸ್ಟ್ರಿಕ್ಟ ಕೋರ್ಟ ) ಜಿಲ್ಲಾ ನ್ಯಾಯಾಲಯ.

'ಹಿಂದು' ಈ ಶಬ್ದದಲ್ಲಿ ಜೈನ, ಬುದ್ಧ, ಮತ್ತು ಶೀಖ ಸಮಾಜಗಳು ಸಮಾವೇಶವಾಗಿವೆ.

ವ್ಯವಸ್ಥಾಪಕ:— ಜಿಮ್ಮೆದಾರನು ಅಲ್ಲದ ಬೇರೆ ವ್ಯಕ್ತಿಯು ಈತನು ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ವ್ಯವಸ್ಥೆಯನ್ನು ಸ್ವತಃ ಅಥವಾ ಬೇರೆಯವರೊಡನೆ ಮಾಡುತ್ತಾನೆ.

ಕೆಳಗೆ ಕಾಣಿಸಿದ ಜನರು ವ್ಯವಸ್ಥಾಪಕರೊಳಗೆ ಬರುತ್ತಾರೆ.

(a) ಮಠವಿದ್ದಲ್ಲಿ, ಅಂಥ ಮಠದ ಅಧಿಕಾರಿಯು.

(b) ವಾಕ್ಫ ಇದ್ದಲ್ಲಿ ಅಂಥವಾಕ್ಫದ ಮುತವಲ್ಲಿಯು.

(c) ೧೮೬೦ ನೇ ಸೊಸಾಯಿಟಿ ರಿಜಿಸ್ಟ್ರೇಶನ್ ಕಾಯದೆ ಮೇರೆಗೆ ನೋಂವಣಿ ಆದ ಸೊಸಾಯಿಟಿ ಇದ್ದಲ್ಲಿ ಅಂಥ ಸೊಸಾಯಿಟಿಯ ಆಡಳಿತೆ ಮಾಡುವ ಕಮಿಟಿ.

**'ಮಠ'**:— ಹಿಂದು ಧರ್ಮದ ಪ್ರಗತಿಗಾಗಿ ಸ್ಥಾಪಿಸಲ್ಪಟ್ಟ ಒಂದು ಸಂಸ್ಥೆಯಾಗಿದ್ದು, ಶಿಷ್ಯವೃಂದಕ್ಕೆ ಆಧ್ಯಾತ್ಮಿಕ ಬೋಧೆಯನ್ನಾಗಲಿ ಅಥವಾ ಧಾರ್ಮಿಕ ಸಂಸ್ಕಾರವನ್ನಾಗಲಿ ಕೊಡುವದೇ ಕರ್ತವ್ಯವಾಗಿದ್ದ ಅಥವಾ ಅಂಥ ಶಿಷ್ಯ ಸಮುದಾಯದ ಮೇಲೆ ತನ್ನ ಪ್ರಭುತ್ವವನ್ನು ನಡಿಸುವ ಯಾವನಾದರೊಬ್ಬನು ಅಂಥ ಸಂಸ್ಥೆಗೆ ಅಧಿಪತಿಯಾಗಿರಬೇಕು. ಈ ಸಂಸ್ಥೆಗೆ ಸಂಬಂಧಪಟ್ಟ ಧಾರ್ಮಿಕ ಪೂಜಾ ಅಥವಾ ಸಂಸ್ಕಾರ ಸ್ಥಾನಗಳೂ ಸಹ ಮಠದ ವ್ಯವಸ್ಥೆಯಲ್ಲಿ ಸಮಾವೇಶವಾಗುತ್ತವೆ.

**'ಸಾರ್ವಜನಿಕ ಜಿಮ್ಮೆ'**:— ಸಾರ್ವಜನಿಕ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶ ಅಥವಾ ಎರಡೂ ಉದ್ದೇಶಗಳ ಸಲುವಾಗಿ ನಿರ್ದಿಷ್ಟವಾಗಿ ಕೊಟ್ಟ ವಿಶ್ವಸ್ಥ ಆಸ್ತಿ. ಈ ಜಿಮ್ಮೆಯಲ್ಲಿ ದೇವಾಲಯ, ಮಠ, ಮತ್ತು ವಾಕ್ಫ, ಧರ್ಮಾದಾವ, ಅಥವಾ ಯಾವದೇ ಧಾರ್ಮಿಕ ಅಥವಾ ಧರ್ಮಾರ್ಥ ಉಂಬಳಿ ಆಸ್ತಿ ಮತ್ತು ಧಾರ್ಮಿಕ ಅಥವಾ ಧರ್ಮಾರ್ಥ ಕಾರ್ಯಗಳಿಗಾಗಿ ಅಥವಾ ಎರಡೂ ಕಾರ್ಯಗಳಿಗಾಗಿ ಸ್ಥಾಪಿಸಲ್ಪಟ್ಟ ಸಂಸ್ಥೆ ಅಂಥ ಸಂಸ್ಥೆಯು ೧೮೬೦ ನೇ ಸಾಲಿನ ಸೊಸಾಯಿಟಿ ನೊಂದಣಿ ಕಾಯದೆ ಮೇರೆಗೆ ನೋಂದಾಯಿಸಲ್ಪಟ್ಟಿರಬೇಕು.

**ಮಂದಿರ**:— ಸಾರ್ವಜನಿಕ ಧಾರ್ಮಿಕ ಪೂಜಾಸ್ಥಾನವಾಗಿ ಉಪಯೋಗಿಸಲ್ಪಟ್ಟ ಯಾವದೇ ಹೆಸರಿನಿಂದ ಕರೆಯಲ್ಪಟ್ಟ ಸ್ಥಳವಿರತಕ್ಕದ್ದು

ಮತ್ತು ಹಿಂದುಸಮಾಜ ಅಥವಾ ಅದರೊಳಗಿನ ಯಾವದೇ ಪಂಗಡದ ಹಿತದ ಸಲುವಾಗಿ ಅಥವಾ ಉಪಯೋಗಕ್ಕಾಗಿ ಸ್ಥಾಪಿಸಲ್ಪಟ್ಟಿದ್ದು ಸಾರ್ವಜನಿಕ ಧಾರ್ಮಿಕ ಪೂಜಾಸ್ಥಾನವೆಂದು ಹಿಂದು ಸಮಾಜದವರಿಗೆ ಅಥವಾ ಆದರ ಪಂಗಡದವರಿಗೆ ಪ್ರವೇಶಿಸಲಿಕ್ಕೆ ಹಕ್ಕು ಇರಬೇಕು. ಇಂಥ ಸ್ಥಾನಕ್ಕೆ ಮಂದಿರವೆನ್ನುವರು.

ಜಿಮ್ಮೆದಾರ:— ಯಾವನಾದರೊಬ್ಬನ ಕಡೆಗೆ ಅಥವಾ ಹೆಚ್ಚು ಜನರ ಕಡೆಗೆ ವಿಶ್ವಸ್ಥ ಆಸ್ತಿಯು ಕೊಡಲ್ಪಟ್ಟರೆ ಆತನು ಜಿಮ್ಮೆದಾರನಾಗುತ್ತಾನೆ. ವ್ಯವಸ್ಥಾಪಕನು ಸಹ ಜಿಮ್ಮೆದಾರ ಶ್ರೇಣಿಯಲ್ಲಿ ಬರುತ್ತಾನೆ.

ವಾಕ್ಫ:— ಯಾವನಾದರೊಬ್ಬನು ಇಸ್ಲಾಮ ತತ್ವದ ಮೇರೆಗೆ ಸದಾಚಾರದ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ಸ್ಥಾವರ ಅಥವಾ ಜಂಗಮ ಆಸ್ತಿಯನ್ನು ಆಚಂದ್ರಾರ್ಕವಾಗಿ ನಡೆಯುವಂತೆ ಅರ್ಪಿಸಿದರೆ ಅದಕ್ಕೆ ವಾಕ್ಫ ಅನ್ನುವರು.

## ೨ ನೇ ಪ್ರಕರಣ

(೩) ಈ ಕಾನೂನಿನಲ್ಲಿ ಆದೇಶಿಸಲ್ಪಟ್ಟ ಆಡಳಿತ ಮತ್ತು ಮೇಲ್ವಿಚಾರಣೆಯನ್ನು ಮಾಡಲಿಕ್ಕೆ ಮುಂಬಯಿ ರಾಜ್ಯ ಸರಕಾರದವರು ಚಾರಿಟಿ ಕಮಿಶನರರನ್ನು ನೇಮಿಸಿ ಅವರ ಅಧಿಕಾರ ಮತ್ತು ಕರ್ತವ್ಯಗಳನ್ನು ಸೃಷ್ಟಿ ಕರಿಸುವರು.

(೪) ಜಿಲ್ಹಾ ನ್ಯಾಯಾಧೀಶರ, ಮುಂಬಯಿ ಪಟ್ಟಣದ ದಿವಾಣಿ ನ್ಯಾಯಾಲಯದ ನ್ಯಾಯಾಧೀಶರ ಅಥವಾ ಹತ್ತುವರ್ಷಗಳಕಿಂತ ಕಡಿಮೆಯಿಲ್ಲದಷ್ಟು ಅವಧಿಯವರೆಗೆ ಎಡ್ವೋಕೇಟ,ಹಾಯಕೋರ್ಟಿನ ಅಟೋರ್ನಿ, ಅಥವಾ ವಕೀಲರ ಸ್ಥಾನದಲ್ಲಿದ್ದವರು ಚಾರಿಟಿ ಕಮಿಶನರರಾಗಿ ಆರಿಸಲ್ಪಡುವರು.

(೫) ರಾಜ್ಯ ಸರಕಾರದವರು ಜಿಮ್ಮೆ ಆಸ್ತಿಗಳ ಸಲುವಾಗಿ ಪ್ರದೇಶ ಅಥವಾ ಉಪಪ್ರದೇಶಗಳನ್ನು ನಿರ್ಮಿಸಿ ಅವುಗಳ ಆಡಳಿತಗಾಗಿ ಅಸಿಸ್ಟಂಟ

ಚಾರಿಟಿ ಕಮೀಶನರ ಅಥವಾ ಡೆಪ್ಯುಟಿ ಚಾರಿಟಿ ಕಮೀಶನರರನ್ನು ನೇಮಿಸುವರು.

ಈ ಪ್ರಕಾರವಾಗಿ ನೇಮಿಸಲ್ಪಟ್ಟ ಅಧಿಕಾರಿಗಳು ರಾಜ್ಯ ಸರಕಾರದವರ ಆದೇಶದ ಮೇರೆಗೆ ಅಧಿಕಾರವನ್ನು ಮತ್ತು ಕರ್ತವ್ಯವನ್ನು ಸಾಗಿಸುವರು.

(೬) ಚಾರಿಟಿ ಕಮೀಷನರ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಸಹಾಯಕ್ಕಾಗಿ ರಾಜ್ಯ ಸರಕಾರದವರು ಇನ್ಸ್ಪೆಕ್ಟರರನ್ನು ಅಥವಾ ಅಧೀನ ಅಧಿಕಾರಿಗಳನ್ನು ನೇಮಿಸಿ ಅವರ ಅಧಿಕಾರ ಮತ್ತು ಕರ್ತವ್ಯಗಳನ್ನು ಸ್ಪಷ್ಟೀಕರಿಸುವರು.

(೭) ಪ್ರದೇಶ, ಉಪಪ್ರದೇಶದ ಸಲುವಾಗಿ, ಅಥವಾ ಯಾವದಾದರು ಜಿಮ್ಮೆ ಆಸ್ತಿ, ಅಥವಾ ಜಿಮ್ಮೆ ಆಸ್ತಿಗಳ ವರ್ಗಕ್ಕಾಗಲಿ ಸಲಹೆಗಾರರು [ಅಸೆಸರರು] ನೇಮಿಸಲ್ಪಡುವರು.

(೮) ರಾಜ್ಯ ಸರಕಾರದವರು ಚಾರಿಟಿ ಕಮೀಶನರರಿಗಾಗಲಿ ಅಥವಾ ಬೇರೆ ಯಾವದೇ ಅಧಿಕಾರಿಗಾಗಲಿ ತಮ್ಮ ಅಧಿಕಾರ ಅಥವಾ ಕರ್ತವ್ಯಗಳನ್ನು ವಹಿಸಿಕೊಡಬಹುದು.

## ೩ ನೇ ಪ್ರಕರಣ

(೯) ಧರ್ಮಾರ್ಥ ಉದ್ದೇಶಗಳಲ್ಲಿ ಕೆಳಗೆ ಕಂಡ ವಿಷಯಗಳು ಸಮಾವೇಶವಾಗುತ್ತವೆ.

(೧) ಬಡತನ ಅಥವಾ ಸಂಕಟ ಪರಿಹಾರ.

(೨) ಶಿಕ್ಷಣ.

(೩) ಔಷಧೋಪಚಾರ. ಮತ್ತು

(೪) ಸಾರ್ವಜನಿಕ ಉಪಯುಕ್ತತೆಯ ಇನ್ನಿತರ ಉದ್ದೇಶದ ಪ್ರಗತಿ.

ಆದರೆ ಕೆಳಗೆ ಕಾಣಿಸಿದ ಉದ್ದೇಶಗಳು ಧಾರ್ಮಿಕ ಉದ್ದೇಶಗಳಲ್ಲಿ ಬರುವದಿಲ್ಲ.

(ಅ) ಪ್ರತ್ಯೇಕವಾಗಿ ಆಟಗಳ ಬಗ್ಗೆ ಇದ್ದ ಉದ್ದೇಶ.

(ಬ) ಪ್ರತ್ಯೇಕವಾಗಿ ಧಾರ್ಮಿಕ ಬೋಧೆ ಅಥವಾ ಪೂಜೆಗಳ ಬಗ್ಗೆ ಇದ್ದ ಉದ್ದೇಶ.

(೧೦) ಯಾವದೇ ಜಿಮ್ಮೆ ಆಸ್ತಿಗಳ ಬಗ್ಗೆ ಸಂದಿಗ್ಧ ವಿಷಯಗಳು ಇರುತ್ತವೆಂಬ ಕಾರಣದಿಂದ,

(೧೧) ಕೆಲವು ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಗಳು ಇದ್ದು ಮತ್ತೆ ಬೇರೆ ಉದ್ದೇಶಗಳು ಧಾರ್ಮಿಕ ಅಥವಾ ಧರ್ಮಾರ್ಥ ಎಲ್ಲವುಗಳು ಇದ್ದದರ ಕಾರಣದಿಂದ,

(೧೨) ಯಾವದಾದರು ಆಸ್ತಿ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಗಳ ಬಗ್ಗೆ ಕೊಡಲ್ಪಟ್ಟಿದ್ದು ಜಿಮ್ಮೆದಾರನ ಮೇಲೆ ಯಾವ ಹೊಣೆಯು ಇರುವದಿಲ್ಲವೆಂಬ ಕಾರಣದಿಂದ,

(೧೩) ಧರ್ಮಾರ್ಥ ಅಥವಾ ಧಾರ್ಮಿಕ ಉದ್ದೇಶಕ್ಕೆ ಅಥವಾ ಒಂದು ಸಂಸ್ಥೆಯ ಹಿತಕ್ಕಾಗಿ ವಿಶ್ವಸ್ಥ ಆಸ್ತಿಯನ್ನು ಕೊಟ್ಟಾಗ್ಗ್ಯೆ.

ಅ) ಯಾವ ಉದ್ದೇಶಕ್ಕಾಗಿ ಅಂಥ ವಿಶ್ವಸ್ಥ ಆಸ್ತಿಯು ಕೊಡಲ್ಪಟ್ಟಿದೆಯೋ ಆ ಉದ್ದೇಶವು ಅಸಂಭವವಾಗಿದ್ದರೆ, ಅಥವಾ

ಬ) ಅಂಥ ಸಂಸ್ಥೆಯು ಅಸ್ತಿತ್ವದಲ್ಲಿರದಿದ್ದರೆ ಈ ಕಾರಣಗಳಿಂದ

ಸಾರ್ವಜನಿಕ ಜಿಮ್ಮೆ ಆಸ್ತಿಯ ಸ್ವರೂಪವು ಬದಲಾಗುವದಿಲ್ಲ. ಅದು ಸಾರ್ವಜನಿಕ ಜಿಮ್ಮೆ ಆಸ್ತಿಯಾಗಿಯೇ ಉಳಿಯುತ್ತದೆ.

## ೪ ನೇ ಪ್ರಕರಣ

(೧೪) ಈ ಕಾನೂನಿನ ಸಲುವಾಗಿ ರಾಜ್ಯ ಸರಕಾರದವರು ಪ್ರದೇಶ ಮತ್ತು ಉಪಪ್ರದೇಶಗಳನ್ನು ನಿರ್ಮಿಸಿ ಅವುಗಳ ಗಡಿಗಳನ್ನು ನಿರ್ಣಯಿಸುವರು.

(೧೫) ಪ್ರತಿಯೊಂದು ಪ್ರದೇಶ ಅಥವಾ ಉಪಪ್ರದೇಶದಲ್ಲಿ ಸಾರ್ವಜನಿಕ ಜಿಮ್ಮೆ ನೋಂದಣಿ ಕಚೇರಿಯು ಸ್ಥಾಪಿಸಲ್ಪಡುವದು.

(೧೬) ರಾಜ್ಯ ಸರಕಾರದವರು ಇಂಥ ಸಾರ್ವಜನಿಕ ಜಿಮ್ಮೆ ನೋಂದಣಿ ಕಚೇರಿಯ ಆಡಳಿತೆಯನ್ನು ನೋಡಲಿಕ್ಕೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರನ್ನು ನೇಮಿಸುವರು.

(೧೭) ಇಂಥ ಪ್ರತಿಯೊಂದು ಸಾರ್ವಜನಿಕ ಜಿಮ್ಮೆ ನೋಂದಣಿ ಕಚೇರಿಯಲ್ಲಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ರಾಜ್ಯ ಸರಕಾರದ ಆದೇಶದ ಮೇರೆಗೆ ಪುಸ್ತಕಗಳನ್ನು, ನೋಂದಣಿ ಪುಸ್ತಕಗಳನ್ನು ಮತ್ತು ಸೂಚಿ ಪತ್ರ ಅಥವಾ ಅನುಕ್ರಮಣಿಕೆ ಪುಸ್ತಕಗಳನ್ನು ಇಡುವರು.

(೧೮) (೧) ಯಾವ ಸಾರ್ವಜನಿಕ ವಿಶ್ವಸ್ಥ ಆಸ್ತಿಗೆ ಈ ಕಾಯದೆಯು ಅನ್ವಯಿಸಲ್ಪಟ್ಟಿರುವದೋ ಅಂಥ ವಿಶ್ವಸ್ಥ ಆಸ್ತಿಯ ಜಿಮ್ಮೆದಾರನು ಸಾರ್ವಜನಿಕ ಜಿಮ್ಮೆ ಆಸ್ತಿಯನ್ನು ನೋಂದಣಿ ಮಾಡಿಸುವ ಬಗ್ಗೆ ಅರ್ಜಿ ಮಾಡಿ ಕೊಳ್ಳುವದು ಆತನ ಕರ್ತವ್ಯವಾಗಿರುತ್ತದೆ.

(೨) ಯಾವ ಪ್ರದೇಶದಲ್ಲಿ ಎಲ್ಲ ಜಿಮ್ಮೆ ಆಸ್ತಿಯಾಗಲಿ ಅಥವಾ ಅದರ ವಿಶೇಷ ಭಾಗವಾಗಲಿ ಇರುತ್ತದೆಯೋ ಅಂಥ ಪ್ರದೇಶ ಅಥವಾ ಉಪ ಪ್ರದೇಶದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಕಡೆಗೆ ಅರ್ಜಿ ಮಾಡಿ ಕೊಳ್ಳಬೇಕು.

(೩) ಅಂಥ ಅರ್ಜಿಯು ನಿರ್ದಿಷ್ಟ ಪದ್ಧತಿಯ ಮೇರೆಗೆ ಇರಬೇಕು. ಮತ್ತು ಅದರ ಸಂಗಡ ನಿರ್ದಿಷ್ಟ ಪಡಿಸಿದ ರಕಮು (Fees) ಫೀ ಹಣವನ್ನು ಕಳಿಸಬೇಕು.

(೪) ಇಂಥ ಅರ್ಜಿಯು

(ಅ) ಈ ಕಾಯದೆಯು ಅನ್ವಯಿಸಲ್ಪಡುವ ಪೂರ್ವದಲ್ಲಿ ಸಾರ್ವಜನಿಕ ಜಿಮ್ಮೆ ಆಸ್ತಿಯು ಹುಟ್ಟಿದ್ದರೆ ಈ ಕಾಯದೆ ಅನ್ವಯಿಸಿದ ಮೂರು ತಿಂಗಳಲ್ಲಿ ಕಳಿಸಲ್ಪಡಬೇಕು.

(ಬ) ಈ ಕಾಯದೆ ಅಮಲಿನಲ್ಲಿ ಬಂದ ನಂತರ ಸಾರ್ವಜನಿಕ ವಿಶ್ವಸ್ಥ ಆಸ್ತಿಯು ಹುಟ್ಟಿದ್ದರೆ ಅದು ಹುಟ್ಟಿದ ಮೂರು ತಿಂಗಳ ಅವಧಿಯಲ್ಲಿ ಕಳಿಸಲ್ಪಡಬೇಕು.

(೫) ಅಂಥ ಅರ್ಜಿಯಲ್ಲಿ ಕೆಳಗೆ ಕಾಣಿಸಿದ ವಿಷಯಗಳು ಅವಶ್ಯವಾಗಿ ರತಕ್ಕದ್ದು.

(I) ಜಿಮ್ಮೆದಾರನ ಮತ್ತು ವ್ಯವಸ್ಥಾಪಕನ ಹೆಸರು ಮತ್ತು ವಿಳಾಸ.
(II) ಜಿಮ್ಮೆದಾರನ ಅಧಿಕಾರಸ್ಥಾನದ ಉತ್ತರಾಧಿಕಾರದ ಪದ್ಧತಿ
(III) ಸ್ಥಾವರಜಂಗಮ ಜಿಮ್ಮೆ ಆಸ್ತಿಯ ವಿವರ
(IV) ಸ್ಥಾವರಜಂಗಮ ಆಸ್ತಿಗಳ ಅಂದಾಜು ಕಿಮ್ಮತ್ತು
(V) ಅರ್ಜಿ ಮಾಡಿದ ತಾರೀಖಿನಿಂದ ೩ ವರ್ಷಗಳ ಹಿಂದಿನ ಉತ್ಪನ್ನದ ಮೇಲಿಂದ ಸರಾಸರಿ ಮಾಡಿ ತೆಗೆದ ಒಟ್ಟು ವಾರ್ಷಿಕ ಜಿಮ್ಮೆ ಆಸ್ತಿಯ ಉತ್ಪನ್ನ

(VI) ಅರ್ಜಿ ಮಾಡಿದ ತಾರೀಖಿನಿಂದ ೩ ವರ್ಷಗಳ ಹಿಂದಿನ ಖರ್ಚಿನ ಮೇಲಿಂದ ಸರಾಸರಿ ಮಾಡಿ ತೆಗೆದ ಒಟ್ಟು ಜಿಮ್ಮೆ ಆಸ್ತಿಯ ವಾರ್ಷಿಕ ಖರ್ಚು

(VII) ಜಿಮ್ಮೆದಾರ ಅಥವಾ ವ್ಯವಸ್ಥಾಪಕನಿಗೆ ಕಳಿಸಬೇಕಾದ ಪತ್ರ ವ್ಯವಹಾರದ ವಿಳಾಸ

(VIII) ಈ ವಿಷಯದಲ್ಲಿ ನಿರ್ದಿಷ್ಟಪಡಿಸಿದ ಬೇರೆ ವಿಷಯಗಳು.

೬) ಈ ಪ್ರಕಾರವಾಗಿ ಮಾಡಲ್ಪಟ್ಟ ಅರ್ಜಿಗೆ ಜಿಮ್ಮೆದಾರನಾಗಲಿ, ಅಥವಾ ಅವನಿಂದ ಈ ಬಗ್ಗೆ ನೇಮಿಸಲ್ಪಟ್ಟ ಎಜಂಟನಾಗಲಿ ರುಜು ಹಾಕಬೇಕು. ಜಿಮ್ಮೆ ಹುಟ್ಟಿಸಿದ ಕಾಗದವೇನಾದರೂ ಇದ್ದರೆ ಈ ಅರ್ಜಿ ಜೊತೆಗೆ ಕಳಿಸಬೇಕು.

(೧೯) ೧೮ನೇ ಕಲ್ಮದಲ್ಲಿ ಕಾಣಿಸಿದ ಮೇರೆಗೆ ಅರ್ಜಿ ಬಂದ ಮೇಲೆ ಅಥವಾ ವಿಶ್ವಸ್ಥ ಆಸ್ತಿಯಲ್ಲಿ ಹಿತವಿದ್ದ ಯಾವನಾದರೊಬ್ಬನಿಂದ ಅರ್ಜಿ ಬಂದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಕೆಳಗೆ ಕಾಣಿಸಿದ ವಿಷಯಗಳನ್ನು ಅರಿತುಕೊಳ್ಳಲು ವಿಚಾರಣೆಯನ್ನು ಮಾಡುವರು :—

(I) ಯಾವದಾದರೂ ಆಸ್ತಿಯು ಜಿಮ್ಮೆ ಆಸ್ತಿ ಇದೆಯೋ? ಇದ್ದರೆ ಅದು ಸಾರ್ವಜನಿಕ ಜಿಮ್ಮೆ ಆಸ್ತಿಯೋ?

(II) ಯಾವದಾದರೂ ಆಸ್ತಿಯು ಅಂಥ ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟಿದ್ದೋ ?

(III) ಎಲ್ಲ ಸಾರ್ವಜನಿಕ ಜಿಮ್ಮೆ ಆಸ್ತಿಯು ಅಥವಾ ಅದರ ಹೆಚ್ಚಿನ ಭಾಗ ತನ್ನ ಹದ್ದಿಯಲ್ಲಿರುತ್ತದೆಯೋ ?

(IV) ಅಂಥ ಜಿಮ್ಮೆ ಆಸ್ತಿಯ ಅಥವಾ ವ್ಯವಸ್ಥಾಪಕನ ಹೆಸರು ಮತ್ತು ವಿಳಾಸ.

(V) ಅಂಥ ವಿಶ್ವಸ್ಥ ಆಸ್ತಿಯ ಜಿಮ್ಮೆದಾರನ ಅಧಿಕಾರಸ್ಥಾನದ ಉತ್ತರಾಧಿಕಾರದ ಪದ್ಧತಿ.

(VI) ಅಂಥ ಜಿಮ್ಮೆ ಆಸ್ತಿಯ ಉಗಮ ಮತ್ತು ಸ್ವರೂಪ ಮತ್ತು ಉದ್ದೇಶ

(VII) ಅಂಥ ಜಿಮ್ಮೆ ಆಸ್ತಿಯ ವಟ್ಟು ಸರಾಸರಿ ವಾರ್ಷಿಕ ಉತ್ಪನ್ನ ಮತ್ತು ಖರ್ಚು.

(VIII) ಮತ್ತು ಇನ್ನಿತರ ಅವಶ್ಯ ವಿಷಯಗಳು.

(೨೦) :— ಈ ಪ್ರಕಾರದ ವಿಚಾರಣೆಯು ಮುಗಿದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ೧೯ ಕಲಮಿನಲ್ಲಿ ತೋರಿಸಿದ ವಿಷಯಗಳ ಮೇಲೆ ಕಾರಣಸಮೇತ ತಮ್ಮ ನಿರ್ಣಯಗಳನ್ನು ಕೊಡುವರು.

(೨೧):- ಡೆಪ್ಯುಟಿ ಅಥವಾ ಚಾರಿಟಿ ಕಮೀಶನರರು ತಮ್ಮ ಆಫೀಸಿನ ನೋಂದಣಿ ಬುಕ್ಕಿನಲ್ಲಿ ೨೦ ನೇ ಕಲ್ಮಿನ ಪ್ರಕಾರ ಕೊಟ್ಟ ನಿರ್ಣಯಗಳನ್ನು ಅಥವಾ ಅಂಥ ನಿರ್ಣಯಗಳ ಮೇಲೆ ಅಪೀಲು ಆಗಿದ್ದರೆ ಅಥವಾ ಅರ್ಜಿ ಮಾಡಲ್ಪಟ್ಟಿದ್ದರೆ ಆ ಪ್ರಕರ್ಣದಲ್ಲಿ ಆದ ತೀರ್ಮಾನವನ್ನು ನಮೂದ ಮಾಡುವರು.

(೨೨) (೧) ಮೇಲಿನಂತೆ ಮಾಡಿದ ದಾಖಲೆಗಳಲ್ಲಿ ಏನಾದರೂ ಬದಲಾವಣೆಯಾದಲ್ಲಿ ಅಂಥ ಬದಲಾವಣೆಯಾದ ೯೦ ದಿವ್ಸಗಳಲ್ಲಿ ಅಥವಾ ಸಾರ್ವಜನಿಕ ಜಿಮ್ಮೆ ಆಡಳಿತೆಯ ಹಿತದೃಷ್ಟಿಯಿಂದ ಏನಾದರೂ ಬದಲಾವಣೆ ಮಾಡಬೇಕೆಂದು ಜಿಮ್ಮೆದಾರರು ಅಪೇಕ್ಷಿಸಿದಲ್ಲಿ ಡೆಪ್ಯುಟಿ ಅಥವಾ ಅಸಿ

ಸ್ಟಂಟ ಚಾರಿಟಿ ಕಮೀಶನರರ ಕಡೆಗೆ ಅಂಥ ಬದಲಾವಣೆ ವಿಷಯಗಳನ್ನು ಸೇರಿಸಿ ರಿಪೋರ್ಟ್ ಮಾಡಬೇಕು. ಅಂಥ ರಿಪೋರ್ಟ್ ನಿರ್ದಿಷ್ಟ ಪದ್ಧತಿಯಲ್ಲಿರತಕ್ಕದ್ದು.

(೨) ಈ ಬದಲಾವಣೆಯ ಯೋಗ್ಯಾಯೋಗ್ಯತೆಯ ಬಗ್ಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ವಿಚಾರಣೆಯನ್ನು ಮಾಡುವರು.

೩) ಡೆಪ್ಯುಟಿ ಅಥವಾ ಅಸಿಸ್ಟಂಟಿ ಚಾರಿಟಿ ಕಮೀಶನರರು ಮೇಲ್ಕಾಣಿಸಿದಂತೆ ವರದಿಯನ್ನು ಸ್ವೀಕರಿಸಿದ ಮೇಲೆ ತಮ್ಮ ವಿಚಾರಣೆಯಲ್ಲಿ ಬದಲಾವಣೆಗಳು ಉಂಟಾಗಿರುತ್ತವೆಂದು ಕಂಡುಬಂದಾಗ್ಗೆ ಆಫೀಸಿನ ನೊಂದಣಿ ರಜಿಸ್ಟರ ಪುಸ್ತಕದಲ್ಲಿ ಕಾರಣ ಸಮೇತ ತಮ್ಮ ನಿರ್ಣಯನ್ನು ಬರೆಯುವರು. ಈ ಪ್ರಕಾರವಾಗಿ ಬರೆದ ನಿರ್ಣಯದ ವಿರುದ್ಧ ಚಾರಿಟಿ ಕಮೀಶನರರಿಗೆ ಅಪೀಲು ಮಾಡಬಹುದು. ಡೆಪ್ಯೂಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಅಪೀಲಿನಲ್ಲಿ ಆದ ನಿರ್ಣಯದಂತೆ ಅಂಥ ನೊಂದಣಿ ಪುಸ್ತಕದಲ್ಲಿ ತಿದ್ದುಪಡಿ ಮಾಡುವರು. ಈ ಪ್ರಕಾರವಾಗಿ ತಿದ್ದುಪಡಿ ಮಾಡಲ್ಪಟ್ಟ ನಿರ್ಣಯವೇ ಕೊನೆಯದಾಗಿ ಉಳಿಯುವದು.

(೩ಅ) ಸಾರ್ವಜನಿಕ ಜಿಮ್ಮೆ ಆಸ್ತಿಯ ಭಾಗವು ಯಾವದಾದರೊಂದು ಪ್ರದೇಶ ಅಥವಾ ಉಪಪ್ರದೇಶಗಳಿಗಿಂತ ಹೆಚ್ಚು ಪ್ರದೇಶಗಳಲ್ಲಿದ್ದರೆ ಯಾವ ಪ್ರದೇಶದಲ್ಲಿ ಅಂಥ ಸಾರ್ವಜನಿಕ ಜಿಮ್ಮೆ ಆಸ್ತಿಯು ನೊಂದಣಿ ಮಾಡಲ್ಪಟ್ಟಿದೆಯೋ ಅಂಥ ಪ್ರದೇಶದ ಅಥವಾ ಉಪಪ್ರದೇಶದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಅಂಥ ವಿಶ್ವಸ್ಥ ಆಸ್ತಿಯು ಇದ್ದ ಬೇರೆ ಪ್ರದೇಶ ಅಥವಾ ಉಪಪ್ರದೇಶದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಕಡೆಗೆ ತಾವು ಮಾಡಿದ ದಾಖಲೆಗಳ ನಕಲನ್ನು ಕಳಿಸಿಕೊಡುವರು. ಆ ಮೇಲೆ ಅಂಥ ಪ್ರದೇಶದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಈ ಬಗ್ಗೆ ನಿರ್ದಿಷ್ಟಪಡಿಸಿದ ನೊಂದಣಿ ಪುಸ್ತಕದಲ್ಲಿ ನಮೂದ ಮಾಡುವರು. ಈ ಪ್ರಕಾರವಾಗಿ ನಮೂದ ಮಾಡಿದ ದಾಖಲೆಯ ನಕಲನ್ನು ಯಾವ ಭಾಗದಲ್ಲಿ ವಿಶ್ವಸ್ಥ ಆಸ್ತಿಯು ಇರುತ್ತದೆಯೋ ಅಂಥ ಭಾಗದ ಸಬ್ ರಿಜಿಸ್ಟರ ಕಡೆಗೆ ಕಳಿಸಿಕೊಡಲಾಗುವದು.

(೨೪) ಯಾವದೇ ಪ್ರದೇಶ ಅಥವಾ ಉಪಪ್ರದೇಶದಲ್ಲಿ ಮೊದಲೇ ನೊಂದುಮಾಡಲ್ಪಟ್ಟ ಜಿನ್ನ್ಸಿ ಆಸ್ತಿಯ ಬಗ್ಗೆ ಪುನಃ ಬೇರೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟ ಕಮಿಶನರರು ವಿಚಾರಣೆ ಮಾಡಲಾರರು.

೨೫) ೧) ಮೇಲೆ ಕಾಣಿಸಿದಂತೆ ೧೯ ಅಥವಾ ೨೨ ನೇ ಕಲಮುಗಳ ಮೇರೆಗೆ ಒಬ್ಬರಿಗಿಂತ ಹೆಚ್ಚು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ಕಡೆಗೆ ವಿಚಾರಣೆ ನಡೆದಾಗ್ಗೆ ವಿಶ್ವಸ್ಥ ಆಸ್ತಿಯಲ್ಲಿ ಹಿತವಿದ್ದ ಯಾರಾದರೊಬ್ಬರ ಅರ್ಜಿಯ ಮೇಲಿಂದಾಗಲಿ ಅಥವಾ ಯಾರ ಮುಂದೆ ವಿಚಾರಣೆ ನಡೆದಿದೆಯೋ ಅಂಥ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ವರದಿಯ ಮೇಲಿಂದಾಗಲಿ ಅಥವಾ ತಾವೇ ಸ್ವತಃ ಆಗಲಿ ಚಾರಿಟಿ ಕಮಿಶರರು ಯಾವ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ಮುಂದೆ ಅಂಥ ಜಿನ್ನ್ಸಿ ಆಸ್ತಿಯ ವಿಚಾರಣೆಯಾಗಬೇಕೆಂಬದನ್ನು ನಿರ್ಣಯಿಸುವರು.

೨) ಈ ಪ್ರಕಾರವಾಗಿ ಚಾರಿಟಿ ಕಮಿಶನರರು ನಿರ್ಣಯಿಸಿದ್ದೇ ಕೊನೆಯದಾಗುವದು. ಹೀಗೆ ನಿರ್ಣಯವಾದ ಮೇಲೆ ಯಾವ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ೧೯ ಅಥವಾ ೨೨ ನೇ ಕಲ್ಮಿನಲ್ಲಿ ತೋರಿಸಿದ ವಿಷಯಗಳ ಬಗ್ಗೆ ವಿಚಾರಣೆಯನ್ನು ನಡಿಸಲಾರರು.

(೨೬) ಈ ಕಾಯದೇ ಮೇರೆಗೆ ಅಧಿಕಾರ ಕೊಡಲ್ಪಟ್ಟ ಪ್ರಕಾರ ಅಧಿಕಾರವುಳ್ಳ ನ್ಯಾಯಾಲಯವು ಸಾರ್ವಜನಿಕ ವಿಶ್ವಸ್ಥ ಆಸ್ತಿಗೆ ಸಂಬಂಧಪಟ್ಟ ಪ್ರಶ್ನೆಯನ್ನು ನಿರ್ಣಯ ಮಾಡಿದ ಮೇಲೆ ಅಂಥ ನಿರ್ಣಯದ ನಕಲನ್ನು ಚಾರಿಟಿ ಕಮಿಶನರರ ಕಡೆಗೆ ಕಳಿಸಿಕೊಡಲಾಗುವದು. ಚಾರಿಟಿ ಕಮಿಶನರರು ೧೭ ನೇ ಕಲಮ ಪ್ರಕಾರ ಇಟ್ಟ ನೋಂದಣಿ ಪುಸ್ತಕದಲ್ಲಿ ಈ ನಿರ್ಣಯವನ್ನು ನಮೂದ ಮಾಡುವರು. ಅಂಥ ನಿರ್ಣಯದ ಮೇಲೆ ಅಪೀಲು ಮಾಡಲ್ಪಟ್ಟದ್ದರೆ, ಅಥವಾ ಅಧಿಕಾರವುಳ್ಳ ಕೋರ್ಟಿಗೆ ರಿವಿಜನ್ ಮಾಡಿದ್ದರೆ ಅಂಥ ಪ್ರಕರಣದಲ್ಲಿ ಆದ ಹುಕುಮಿನ ಮೇರೆಗೆ ತಿದ್ದುಪಡಿಯನ್ನು ಮಾಡಿಸುವದು ಹೀಗೆ ಮಾಡಿದ ತಿದ್ದುಪಡಿಯೇ ಕೊನೆಯದಾಗುತ್ತದೆ.

(೨೭) ಈ ಕಾಯದೆಯ ಮೇರೆಗೆ ವಿಶ್ವಸ್ಥ ಆಸ್ತಿಯು ನೊಂದಣಿ ಪುಸ್ತಕದಲ್ಲಿ ನೊಂದಾಯಿಸಲ್ಪಟ್ಟಾಗ್ಗೆ ಸಾರ್ವಜನಿಕ ಜಿನ್ನ್ಸಿ ಆಸ್ತಿಗಳಿಗೆ ಸಂಬಂಧ

ಪಟ್ಟ ಎಲ್ಲ ಹಕ್ಕಿನ ದಸ್ತೈವಜುಗಳ ಮೇಲೆ ನಿರ್ದಿಷ್ಟಪಡಿಸಿದ ನಮೂನೆ ಯಂತೆ ಜಿಮ್ಮೆಯ ವರ್ಣನೆ ಮತ್ತು ಹೆಸರನ್ನು ಬರೆಯುವದು ಮತ್ತು ಸಿಕ್ಕಾ ಹೊಡೆಯುವದು ಜಿಮ್ಮೆದಾರನ ಕರ್ತವ್ಯವಾಗಿರುತ್ತದೆ. ೧೯ ನೇ ಕಲಮಿನ ಮೇರೆಗೆ ವಿಚಾರಣೆ ಮಾಡುವ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಅಂಥ ಯಾವತ್ತೂ ದಸ್ತೈವಜುಗಳ ಮೇಲೆ ಕಾಯದೆ ಪ್ರಕಾರವಾಗಿ ಮುದ್ರೆಯು ಅಥವಾ ಸಹಿಯು ಮಾಡಲ್ಪಟ್ಟಿದೆಯೊ ಹೇಗೆ ಎಂಬುದನ್ನು ನೋಡಿಕೊಳ್ಳುವರು. ಹಾಗೆ ಮುದ್ರೆ ಅಥವಾ ಸಹಿಯು ಮಾಲ್ಪಡದೆ ಇದ್ದರೆ ಎಲ್ಲ ದಸ್ತೈವಜುಗಳ ಮೇಲೆ ಹಾಗೆ ಮುದ್ರೆ ಅಥವಾ ಸಹಿ ಮಾಡಿಸಿಕೊಳ್ಳುವರು.

(೨) ಈ ಕಾಯದೆ ಮೇರೆಗೆ ಸಾರ್ವಜನಿಕ ವಿಶ್ವಸ್ತ ಆಸ್ತಿಯು ನೋಂದಾಯಿಸಲ್ಪಟ್ಟಮೇಲೆ ಇಂಥ ಹಕ್ಕಿನದಸ್ತೈವಜುಗಳು ಸದ್ರಿ ಜಿಮ್ಮೆಯು ಆಸ್ತಿಯಾಗಿದ್ದರೆ ಜಿಮ್ಮೆದಾರನ ತಾಬಾದಲ್ಲಿ ಅಂಥ ಕಾಗದಪತ್ರಗಳು ಬಂದ ೧೫ ದಿವ್ಸಗಳಲ್ಲಿ ಮೇಲ್ಕಾಣಿಸಿದ ಮೇರೆಗೆ ಮುದ್ರೆ ಅಥವಾ ಸಹಿ ಮಾಡ ಬೇಕಾಗುವದು. ಈ ೧೫ ದಿವ್ಸದ ಅವಧಿಯು ಮುಗಿಯುವದರೊಳಗಾಗಿ ಅಂಥ ಹಕ್ಕಿನ ಕಾಗದಗಳು ಮತ್ತು ಮಾರಾಟ ಅಥವಾ ಯಾವದೆ ರೀತಿ ಯಿಂದ ಪರಾಧೀನ ಮಾಡಲ್ಪಡುವವಿದ್ದರೆ ಜಿಮ್ಮೆದಾರನು ಅಂಥ ಮಾರಾಟ ವತ್ತಿ ಅಥವಾ ಪರಾಧೀನವಾಗುವ ಪೂರ್ವದಲ್ಲಿ ಮೇಲ್ಕಾಣಿಸಿದ ಮೇರೆಗೆ ಮುದ್ರೆ ಅಥವಾ ಸಹಿ ಮಾಡಬೇಕಾಗುವದು.

(೩) ಯಾವದಾದರು ವಿಶ್ವಸ್ಥ ಆಸ್ತಿಗಳಿಗೆ. ಸಂಬಂಧಪಟ್ಟ ಹಕ್ಕಿನ ದಸ್ತೈವಜುಗಳ ಬಗ್ಗೆ ಮೇಲೆ ಕಾಣಿಸಿದಂತೆ ಮುದ್ರೆ ಅಥವಾ ಸಹಿ ಮಾಡ ಲ್ಪಟ್ಟಿದೆಯೋ ಹೇಗೆ ಎಂಬದನ್ನು ಖಾತ್ರಿ ಮಾಡಿಕೊಳ್ಳುವ ಬಗ್ಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಜಿಮ್ಮೆದಾರನ ಕಡೆಯಿಂದ ಅಂಥ ಹಕ್ಕಿನ ದಸ್ತೈವಜುಗಳನ್ನು ತಪಾಸಣೆಗಾಗಿ ಹಾಜರ ಪಡಿಸಿಕೊಳ್ಳು ವರು. ಮತ್ತು ಕಾಗದ ಪತ್ರಗಳ ಮೇಲೆ ಮುದ್ರೆ ಅಥವಾ ಸಹಿ ಆಗಿರದಿದ್ದರೆ ಅವುಗಳ ಮೇಲೆ ಮುದ್ರೆ ಅಥವಾ ಸಹಿ ಮಾಡಿಸಿಕೊಳ್ಳುವರು.

(೨೮) ಈ ಕಾಯದೆ ಪರಿಶಿಷ್ಟದಲ್ಲಿ ಕಾಣಿಸಿದ ಶಾಸನಗಳಲ್ಲಿ ಯಾವ ದಾದರೊಂದು ಶಾಸನದ ಮೇರೆಗೆ ಸಾರ್ವಜನಿಕ ಜಿಮ್ಮೆ ಆಸ್ತಿಯು

ನೋಂದಾಯಿಸಲ್ಪಟ್ಟಿದ್ದರೆ ಅಂಥ ಜಿಮ್ಮೆಯ ನೋಂದಣಿಯು ಈ ಕಾಯದೆ ಅಮಲಿನಲ್ಲಿ ಬಂದ ತಾರೀಖಿನಿಂದ ಆಗಿರುತ್ತದೆಂದು ತಿಳಿಯತಕ್ಕದ್ದು. ಸದ್ರಿ ಜಿಮ್ಮೆ ಆಸ್ತಿಯು ಇದ್ದ ಪ್ರದೇಶದ ಅಧಿಕಾರಿಗಳಾದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ೧೭ನೇ ಕಲಮಿನ ಮೇರೆಗೆ ಇಟ್ಟ ನೋಂದಣಿ ಪುಸ್ತಕದಲ್ಲಿ ದಾಖಲೆ ಮಾಡುವ ಸಲುವಾಗಿ ಜಿಮ್ಮೆದಾರನಿಗೆ ನೋಟೀಸು ಮಾಡುವರು. ಮತ್ತು ವಿಚಾರಣೆಯ ಮೇಲಿಂದ ಕಾರಣ ಸಮೇತ ತಮಗೆ ಯೋಗ್ಯಕಂಡಂತೆ ನಿರ್ಣಯಗಳನ್ನು ಬರೆಯುವದು. ಅವಶ್ಯಕಂಡು ಬಂದ ಬದಲಾವಣೆ ಸಹಿತ ಮೊದಲಿನ ಶಾಸನಗಳ ಪ್ರಕಾರ, ಮಾಡಿದ ದಾಖಲೆಯಂತೆ ಈ ನಿರ್ಣಯಗಳು ಇರತಕ್ಕದ್ದು.

(೨) ಈ ಪ್ರಕಾರ ಕೊಟ್ಟ ನಿರ್ಣಯದ ಬಗ್ಗೆ ಅಸಂತುಷ್ಟರಾದವರು ಚಾರಿಟಿ ಕಮೀಶನರರಿಗೆ ಅಪೀಲ ಮಾಡಿಕೊಳ್ಳಬಹುದು.

(೨೯) ಯಾರಾದರೂ ಮೃತ್ಯುಪತ್ರವನ್ನು ಬರೆದು ತಮ್ಮ ಆಸ್ತಿಯನ್ನು ಸಾರ್ವಜನಿಕ ವಿಶ್ವಸ್ತ ಆಸ್ತಿಯೆಂದು ಮಾಡಿಬಿಟ್ಟರೆ ಅಂಥ ಮೃತ್ಯು ಪತ್ರವನ್ನು ನಡಿಸತಕ್ಕವನು ಮೃತ್ಯು ಪತ್ರದ ಮೇಲೆ ಪ್ರೊಬೇಟ ಪಡಕೊಂಡ ಒಂದು ತಿಂಗಳೊಳಗಾಗಿ ಅಥವಾ ಮೃತ್ಯುಪತ್ರ ಬರೆದಿಟ್ಟವನು ತೀರಿಕೊಂಡ ನಂತರ ೬ ತಿಂಗಳೊಳಗಾಗಿ ೧೮ ನೇ ಕಲ್ಮದಲ್ಲಿ ಕಾಣಿಸಿದಂತೆ ಅರ್ಜಿ ಮಾಡಿಕೊಳ್ಳಬೇಕು. ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಹೀಗೆ ಅರ್ಜಿಮಾಡಿಕೊಳ್ಳಲಿಕ್ಕೆ ಯೋಗ್ಯತೆ ಕಾರಣವಿದ್ದಲ್ಲಿ ಅವಧಿಯನು ಬೆಳಿಸಬಹುದು.

(೩೦) ಈ ಪ್ರಕರಣದ ಮೇರೆಗೆ ನೋಂದ ಮಾಡಲ್ಪಟ್ಟ ಸಾರ್ವಜನಿಕ ಜಿಮ್ಮೆ/ಆಸ್ತಿಗೆ ಸಂಬಂಧಪಟ್ಟ ಯಾವದಾದರೊಂದು ಸ್ಥಾವರ ಆಸ್ತಿಯನ್ನಾಗಲಿ ಅಥವಾ ಅಂಥ ಆಸ್ತಿಯ ಹಕ್ಕಿನ ಕಾಗದಗಳನ್ನಾಗಲಿ ಪಡಕೊಂಡಿದ್ದರೆ ಅವನು ಅಂಥ ಸಾರ್ವಜನಿಕ ವಿಶ್ವಸ್ಥ ಆಸ್ತಿಗೆ ಸಂಬಂಧಪಟ್ಟ ವಿಷಯವನ್ನು ನೋಡಿಕೊಂಡಿದ್ದಾನೆಂದು ತಿಳಿಯತಕ್ಕದ್ದು.

(೩೧) ಯಾವ ಸಾರ್ವಜನಿಕ ಜಿಮ್ಮೆ ಆಸ್ತಿಯು ಈ ಕಾನೂನಿನ ಮೇರೆಗೆ ನೋಂದಾಯಿಸಲ್ಪಟ್ಟಿಲ್ಲವೊ ಅಂಥ ಜಿಮ್ಮೆ ಆಸ್ತಿಯ ಬಗ್ಗೆ ಯಾವ

ಕೋರ್ಟಿನಲ್ಲಿ ದಾವೆ ನಡಿಯಲಾರದು. ಮತ್ತು ನಿರ್ಣಯ ದೊರೆಯಲಾರದು.

## ೫ ನೇ ಪ್ರಕರಣ

(೩೨) (೧) ಈ ಕಾಯಿದೆಯ ಮೇರಿಗೆ ನೋಂದ ಮಾಡಲ್ಪಟ್ಟ ಸಾರ್ವಜನಿಕ ವಿಶ್ವಸ್ಥ ಆಸ್ತಿಯ ಜಿಮ್ಮೆದಾರನು ಪದ್ಧತಿ ಪ್ರಕಾರ ಲೆಖ್ಖ ಪತ್ರಗಳನ್ನು ಇಡಬೇಕು.

(೨) ಚಾರಿಟಿ ಕಮಿಶನರರು ನಿರ್ದಿಷ್ಟಪಡಿಸಿದ ನಮೂನೆಯ ಮೇರಿಗೆ ಮತ್ತು ನಿರ್ದಿಷ್ಟಪಡಿಸಿದ ಎಲ್ಲ ವಿಷಯಗಳಿಂದ ಕೂಡಿದ ಲೆಖ್ಖ ಪತ್ರಗಳು ಇರತಕ್ಕದ್ದು.

೩೩) ಈ ಮೇರಿಗೆ ಇಟ್ಟ ಲೆಖ್ಖ ಪತ್ರಗಳ ಆಥಾವೆಯನ್ನು ಪ್ರತಿ ವರ್ಷ ಮಾರ್ಚ ತಿಂಗಳ ಅಖೈರದೊಳಗಾಗಿಯಾಗಲಿ ಅಥವಾ ಚಾರಿಟಿ ಕಮಿಶನರರು ನಿರ್ದಿಷ್ಟ ಪಡಿಸಿದ ದಿವ್ಸದೊಳಗೆ ತೆಗೆಯತಕ್ಕದ್ದು.

(೨) ಅಂಥ ಲೆಖ್ಖ ಪತ್ರಗಳು ಪ್ರತಿ ವರ್ಷ ತಪಾಸ ಆಗತಕ್ಕದ್ದು. ಈ ತಪಾಸಣೆಗಾಗಿ ರಾಜ್ಯ ಸರಕಾರದವರು ನಿರ್ದಿಷ್ಟ ಮಾಡಿದ ಮೇರಿಗೆ ಲೆಖ್ಖ ತಪಾಸಣೆಗಾರರು ತಪಾಸಮಾಡುವರು.

(೩) ವ್ಯವಸ್ಥಾಪಕರ ತಾಬಾದಲ್ಲಿರತಕ್ಕ ಯಾವತ್ತು ಕಾಗದ ಪತ್ರ, ಲೆಖ್ಖ ಪತ್ರ, ಪುಸ್ತಕಗಳು ಮತ್ತು ಪಾವತಿ ಬುಕ್ಕುಗಳನ್ನು ನೋಡಲಿಕ್ಕೆ ಲೆಖ್ಖ ತಪಾಸಗಾರರಿಗೆ [ಆಡಿಟರರಿಗೆ] ಅಧಿಕಾರವುಂಟು.

(೪) ಚಾರಿಟಿ ಕಮಿಶನರರಿಗೆ 'ಯಾವದೇ ಪ್ರಸಂಗದಲ್ಲಿ ಪ್ರತ್ಯೇಕ ಲೆಖ್ಖ ತಪಾಸಣೆ ಮಾಡಿಸಬೇಕೆಂದು ಕಂಡು ಬಂದಲ್ಲಿ ಪ್ರತ್ಯೇಕ ಆಡಿಟರರನ್ನು ಅವರು ನೇಮಿಸಬಹುದು.

(೩೪) ಲೆಖ್ಖ ತಪಾಸಣೆಗಾರರು ಸಾರ್ವಜನಿಕ ಜಿಮ್ಮೆ ಆಸ್ತಿಯ ಲೆಖ್ಖ ತಪಾಸಣೆ ಮಾಡಿ ಆಥಾವೆ ಪತ್ರಿಕೆ ಮತ್ತು ಆದಾಯ ಮತ್ತು ವ್ಯಯದ ಲೆಖ್ಖವನ್ನು ತಯಾರಿಸಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ

ಕಡೆಗೆ ಅಥವಾ ಚಾರಿಟಿ ಕಮಿಶನರರು ಆದೇಶ ಮಾಡಿದರೆ ಅವರ ಕಡೆಗೆ ಕಳಿಸುವರು.

೨) ಆಡಿಟರರು ತಮ್ಮ ವರದಿಯಲ್ಲಿ ಆಕ್ರಮವಾದ ಬೇ ಕಾಯದೇಶೀರ ಅಥವಾ ಅಯೋಗ್ಯ ಖರ್ಚು ಮಾಡಿದ್ದರೆ ಅಂಥ ಕಲಮುಗಳನ್ನು, ಬಾಕಿ ಹಣವನ್ನು ವಸೂಲ ಮಾಡಲಿಕ್ಕೆ ತಪ್ಪಿದರೆ ಅಥವಾ ಬಿಟ್ಟು ಬಿಟ್ಟಿದ್ದರೆ, ಸಾರ್ವಜನಿಕ ವಿಶ್ವಸ್ಥ ಆಸ್ತಿಗಳಿಗೆ ಸಂಬಂಧಪಟ್ಟ ಇನ್ನಿತರ ಅಸ್ತಿಯನ್ನು ತೆಗೆ ದುಕೊಳ್ಳುವದನ್ನು ತಪ್ಪಿದರೆ ಅಥವಾ ಸಾರ್ವಜನಿಕ ಜಿಮ್ಮೆ ಆಸ್ತಿಯ ಯಾವ ದಾದರು ಆಸ್ತಿಗೆ ಲುಕ್ಸಾನು ಮಾಡಿದರೆ ಮತ್ತು ಹಣವನ್ನು ಹಾಳು ಮಾಡಿದರೆ ಅಂಥ ಕಲಮುಗಳನ್ನು ಬರೆಯುವರು. ಮತ್ತು ಅಂಥ ಲುಕ್ಸಾನು, ಖರ್ಚು, ಬಿಟ್ಟದ್ದು. ಹಾಳು ಮಾಡಿದ್ದು. ಜಿಮ್ಮೆದಾರನು ವಿಶ್ವಸ್ಥದ ದುರುಪ ಯೋಗ ಮಾಡಿರುತ್ತಾನೊ, ಅಥವಾ ಅನ್ಯಾಯ ಮತ್ತು ಅನೀತಿಯಿಂದ ನಡೆದದ್ದರಿಂದ ಈ ಪ್ರಕಾರವಾಗಿ ಆಯಿತೊ ಎಂಬದರ ಬಗ್ಗೆ ಬರೆಯುವರು .

(೩೫) ಜಿಮ್ಮೆ ಆಸ್ತಿಯು ಹಣದ ರೂಪದಲ್ಲಿದ್ದರೆ ಮತ್ತು ಅಂಥ ಹಣವನ್ನು ಸಾರ್ವಜನಿಕ ಜಿಮ್ಮೆ ಹೇತುಗಳ ಸಲುವಾಗಿ ಶೀಘ್ರವಾಗಿ ಉಪ ಯೋಗ ಮಾಡಿ ಕೊಳ್ಳಲು ಬರದಿದ್ದರೆ ಜಿಮ್ಮೆಗಾರನು ಅಂಥ ಹಣವನ್ನು ಭದ್ರವಾದ ಬ್ಯಾಂಕಿನಲ್ಲಿಡಬೇಕು.

ಅಥವಾ ಚಾರಿಟಿ ಕಮಿಶನರರು ಈ ಬಗ್ಗೆ ಆದೇಶಕೊಟ್ಟ ಮೇರೆಗೆ ಜಿಮ್ಮೆದಾರರು ನಡೆಯಬೇಕು.

೩೬) ಜಿಮ್ಮೆ ಶಾಸನ ಪತ್ರದೊಳಗಿನ ಆದೇಶಕ್ಕೆ ಅಧೀನವಾಗಿ

ಅ) ಯಾವದೇ ಸ್ಥಾವರ ಆಸ್ತಿಯ ಮಾರಾಟ, ವತ್ತಿ, ಅದಲು ಬದಲು, ಭಕ್ಷೀಸ. ಮತ್ತು

ಬ) ಒಕ್ಕಲತನದ ಜಮೀನುಗಳು ಇದ್ದಲ್ಲಿ ೧೦ ವರ್ಷ ಮತ್ತು ಬಿನ್ ಶೇತಕಿ ಜಾಗೆ ಅಥವಾ ಇಮಾರತಿಗಳು ಇದ್ದಲ್ಲಿ ೩ ವರ್ಷಗಳಕಿಂತ ಹೆಚ್ಚು ಅವಧಿಯ ವರೆಗೆ ಚಾರಿಟಿ ಕಮೀಶನರರ ಪರವಾನಗಿ ಇಲ್ಲದೆ ಮಾಡಿದ ವ್ಯವ ಹಾರವು ರದ್ದು ಇರುತ್ತವೆ.

## ೬ ನೇ ಪ್ರಕರಣ

೩೭) ಚಾರಿಟಿ ಕಮಿಶನರರು, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಅಥವಾ ರಾಜ್ಯ ಸರಕಾರದಿಂದ ಅಧಿಕಾರ ಪಡೆದ ಯಾವದೇ ಅಧಿಕಾರಿಯು

(a) ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಯಾವದೇ ಆಸ್ತಿಯನ್ನು ಪ್ರವೇಶ ಮಾಡಲಿಕ್ಕೆ ಮತ್ತು ತಪಾಸಮಾಡಲಿಕ್ಕೆ ಅಥವಾ ತಪಾಸ ಮಾಡಿಸಲಿಕ್ಕೆ

(b) ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ನಡೆದ ಜಿಮ್ಮೆದಾರರ ಪ್ರಕರಣಗಳಲ್ಲಿಯ ಯಾವದೇ ಉತಾರಗಳನ್ನು ಅಥವಾ ಕಾಗದಗಳನ್ನು ತರಿಸಿ ತಪಾಸ ಮಾಡಲಿಕ್ಕೆ ಮತ್ತು ಜಿಮ್ಮೆದಾರರ ತಾಬಾದಲ್ಲಿ ಅಥವಾ ಮೇಲ್ವಿಚಾರಣೆಯಲ್ಲಿ ಇದ್ದ ಯಾವದೇ ಪುಸ್ತಕ ಅಥವಾ ಲೆಖ್ಖಪತ್ರಗಳನ್ನು ತರಿಸಿ ತಪಾಸಮಾಡಲಿಕ್ಕೆ.

(c) ಜಿಮ್ಮೆದಾರರಿಂದ ಅಥವಾ ಜಿಮ್ಮೆಕ್ಕೆ ಸಂಬಂಧಪಟ್ಟ ಉಳಿದ ಜನರಿಂದ ವರದಿ, ಲೆಖ್ಖಪತ್ರ, ಜವಾಬು ಮತ್ತು ಹಕೀಕತ್ತುನಾಮೆಯನ್ನು ತರಿಸಿಕೊಳ್ಳಲಿಕ್ಕೆ ಅಧಿಕಾರವುಳ್ಳವರಿರುತ್ತಾರೆ.

ಆದರೆ ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಯಾವದೇ ಆಸ್ತಿಯನ್ನು ಪ್ರವೇಶ ಮಾಡುವ ಕಾಲಕ್ಕೆ ಪ್ರವೇಶ ಮಾಡುವ ಅಧಿಕಾರಿಗಳು ಜಿಮ್ಮೆದಾರನಿಗೆ ಯೋಗ್ಯ ಅವಧಿಯನ್ನು ಕೊಟ್ಟು ತಿಳಿಸಬೇಕು ಮತ್ತು ಅಧಿಕಾರಿಗಳು ಜಿಮ್ಮೆದ ಧಾರ್ಮಿಕ ಪದ್ಧತಿ ಮತ್ತು ರೂಢಿಗಳನ್ನು ಲಕ್ಷದಲ್ಲಿ ತಂದು ಪ್ರವೇಶ ಮಾಡಬೇಕು.

(೩೮) ೩೪ ನೇ ಕಲಮಿನ ಮೇರೆಗೆ ಆಡಿಟರರು ಮಾಡಿದ ವರದಿಯು ತಲ್ಪಿದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಜಿಮ್ಮೆದಾರರಿಗೆ ಅಥವಾ ಸಂಬಂಧ ಪಟ್ಟ ಇನ್ನಿತರರಿಗೆ ಗೊತ್ತುಪಡಿಸಿದ ಅವಧಿಯೊಳಗಾಗಿ ತಮ್ಮ ಉತ್ತರವನ್ನು ಕೊಡಲಿಕ್ಕೆ ತಿಳಿಸುವರು.

(೩೯) ಲೆಖ್ಖ ತಪಾಸಣೆದಾರರ ವರದಿಯ ಮೇಲೆ ಲೆಖ್ಖಪತ್ರಗಳನ್ನು ಮತ್ತು ಅವುಗಳ ಬಗ್ಗೆ ಜಿಮ್ಮೆದಾರರು ಅಥವಾ ಬೇರೆಯವರು ಕೊಟ್ಟ

ಉತ್ತರವನ್ನು ಪರಿಶೀಲಿಸಿದ ನಂತರ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ಜಿಮ್ಮೇದಾರರು ಅಥವಾ ಬೇರೆಯವರು ಅತಿನಿಷ್ಕಾಳಜಿ, ವಿಶ್ವಾಸ ಘಾತಕ, ಅಥವಾ ದುರುಪಯೋಗ, ದುರ್ನಡತೆ ಇವುಗಳ ಪರಿಣಾಮವಾಗಿ ಸಾರ್ವಜನಿಕ ಜಿಮ್ಮಾ ಆಸ್ತಿಗೆ ಹಾನಿತಟ್ಟಿದೆಯೆಂದು ಮನವರಿಕೆಯಾದರೆ ಆ ಮೇರೆಗೆ ಚಾರಿಟಿ ಕಮಿಶನರರಿಗೆ ಅವರು ಈ ಎಲ್ಲ ಸಂಗತಿಗಳ ಬಗ್ಗೆ ವರದಿ ಮಾಡುವರು.

(೪೦) ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಮಾಡಿದ ವರದಿಯನ್ನು ವಿಚಾರ ಮಾಡಿದ ನಂತರ ಚಾರಿಟಿ ಕಮಿಶನರರು ಸಂಬಂಧಪಟ್ಟ ಜನರಿಗೆ ತಮ್ಮ ತಕರಾರು ಕೊಡಲಿಕ್ಕೆ ಸಾಕಷ್ಟು ಅವಧಿಯನ್ನು ಕೊಟ್ಟು ವಿಚಾರಣೆಯನ್ನು ಸುರುವು ಮಾಡುವರು. ಮತ್ತು ಕೆಳಗೆ ಕಾಣಿಸಿದ ವಿಷಯಗಳ ಮೇಲೆ ತೀರ್ಮಾನಕೊಡುವರು.

(ಅ) ಸಾರ್ವಜನಿಕರ ಜಿಮ್ಮಾ ಆಸ್ತಿಗೆ ಎಷ್ಟು ಹಾನಿ ಆಗಿದೆ?

(ಬ) ಯಾವನಾದರೊಬ್ಬ ಮನುಷ್ಯನ ಗೈರವರ್ತನ, ದುರುಪಯೋಗ ಮತ್ತು ವಿಶ್ವಾಸಘಾತುಕ ಇವುಗಳಿಂದ ಅಂಥ ಹಾನಿ ತಟ್ಟಿದೆಯೋ ಹೇಗೆ ?

(ಕ) ಜಿಮ್ಮೆದಾರರಲ್ಲಿ ಯಾರಾದರೂ ಅಥವಾ ಬೇರೆಯವರು ಅಂಥ ಹಾನಿಗೆ ಕಾರಣರೋ ?

(ಡ) ಅಂಥ ನಷ್ಟದ ಸಲುವಾಗಿ ಜಿಮ್ಮೆದಾರರಾಗಲಿ ಅಥವಾ ಬೇರೆಯವರು ಭರಣಾ ಮಾಡತಕ್ಕ ಹಣ.

(೪೧) ಜಿಮ್ಮಾ ಆಸ್ತಿಗೆ ಹಾನಿ ತಟ್ಟಿದ್ದರ ಬಗ್ಗೆ ಎಷ್ಟಾದರೂ ಹಣವನ್ನು ಕೊಡಬಹುದಾಗುವದೆಂದು ಚಾರಿಟಿ ಕಮಿಶನರರು ನಿರ್ಣಯಿಸಿದಲ್ಲಿ, ಆ ಮನುಷ್ಯನ ಕಡೆಯಿಂದ ಎಲ್ಲ ಹಣವನ್ನು ವಸೂಲ ಮಾಡುವಂತೆ ಚಾರಿಟಿ ಕಮಿಶನರರು ಆದೇಶ ಮಾಡಬಹುದು.

## ೭ ನೇ ಪ್ರಕರಣ

(೪೨) ಚಾರಿಟಿ ಕಮಿಶನರರು ಸರಕಾರದ ಶಾಸನ ಪಡಕೊಂಡು ಆಚರಿಸುವ ಸಂಘದಂತಿದ್ದು [Corporation Sole] ಅದಕ್ಕೆ ಉತ್ತರಾ

ಧಿಕಾರದ ಪರಂಪರೆ ಅದೆ ಮತ್ತು ಆದಕ್ಕೆ ಸಾಮಾನ್ಯ ಮುದ್ರೆ ಅದೆ. ಅಂಥ ಸಂಘದ ಹೆಸರಿನಿಂದ ದಾವೆ ಮಾಡಬಹುದು ಮತ್ತು ಅವರ ವಿರುದ್ಧ ದಾವೆ ಮಾಡಬಹುದು.

(೪೩) ಚಾರಿಟಿ ಕಮೀಶನರರು ಈ ಕಾಯದೆ ತತ್ವದ ಮೇರೆಗೆ ಮುಂಬಯಿ ರಾಜ್ಯದ ಪರವಾಗಿ ಧರ್ಮಾರ್ಥ ಜುಂಗಳಿ ಆಸ್ತಿಗಳ ತಾಬೇದಾರರು ಇರುತ್ತಾರೆ.

(೪೪) ಈ ಕಾಯದೇ ತತ್ವಗಳಿಗೆ ಆಧೀನವಾಗಿ ಅಧಿಕಾರವುಳ್ಳ ನ್ಯಾಯಾಲಯವು ಅಥವಾ ಜಿಮ್ಮೆ ಉತ್ಪಾದಕರು ಯಾವದಾದರೂ ಜಿಮ್ಮೆ ಆಸ್ತಿಯ ಜಿಮ್ಮೆದಾರನೆಂದು ಚಾರಿಟಿ ಕಮೀಶನರರನ್ನು ನೇಮಿಸಬಹುದು.

(೨) ಹೀಗೆ ನೇಮಿಸಲ್ಪಟ್ಟ ಚಾರಿಟಿ ಕಮೀಶನರರು ಜಿಮ್ಮೆ ಆಸ್ತಿಯ ಜಿಮ್ಮೆದಾರನಂತೆ ಯಾವತ್ತು ಹೊಣೆಗಾರಿಕೆ ಹಕ್ಕು ಬಾಧ್ಯತೆ ಮತ್ತು ಅಧಿಕಾರವುಳ್ಳವರಾಗುತ್ತಾರೆ.

(೩) ಚಾರಿಟಿ ಕಮೀಶನರರು ಹಾಗೆ ಜಿಮ್ಮೆದಾರರಾಗಲಿಕ್ಕೆ ಒಪ್ಪಲಿಕ್ಕಿಲ್ಲ ಅಥವಾ ಕೆಲವು ಕರಾರುಗಳಿಗೆ ಆಧೀನವಾಗಿ ಒಪ್ಪಬಹುದು.

(೪) ಚಾರಿಟಿ ಕಮೀಶನರರು ಒಬ್ಬರೇ ಜಿಮ್ಮೆದಾರರು ಆಗುವರು. ಅವರೊಡನೆ ಮತ್ತೊಬ್ಬರನ್ನು ನೇಮಿಸಲಿಕ್ಕೆ ಬರಲಾರದು.

(೪೫) ಚಾರಿಟಿ ಕಮೀಶನರರ ಒಪ್ಪಿಗೆಯಿಂದ ಅವರನ್ನು ಯಾವದಾದರು ಜಿಮ್ಮೆ ಆಸ್ತಿಯ ಜಿಮ್ಮೆದಾರರನ್ನಾಗಿ ಜಿಮ್ಮೆ ಉತ್ಪಾದಕರು ನೇಮಿಸಬಹುದು.

ಜಿಮ್ಮೆ ಶಾಸನ ಪತ್ರದಲ್ಲಿ ಚಾರಿಟಿ ಕಮೀಶನರರು ಒಪ್ಪಿಗೆ ಕೊಟ್ಟದ್ದನ್ನು ಸ್ಪಷ್ಟವಾಗಿ ಕಾಣಿಸತಕ್ಕದ್ದು.

ಈ ಮೇರೆಗೆ ನೇಮಣೂಕು ಆದ ಮೇಲೆ ಚಾರಿಟಿ ಕಮೀಶನರರ ವಶದಲ್ಲಿ ಎಲ್ಲ ವಿಶ್ವಸ್ಥ ಆಸ್ತಿಯು ಸೇರುವದು ಮತ್ತು ಶಾಸನ ಪತ್ರದಲ್ಲಿ ಬರೆದ ಪ್ರಕಾರ ಚಾರಿಟಿ ಕಮೀಶನರರು ನಡೆಯಬೇಕಾಗುವದು.

(೪೬) ಯಾರಾದರೂ ಮೃತ್ಯುಪತ್ರವನ್ನು ಬರೆದು ಅದರಲ್ಲಿ ಯಾವ ವಾದರು ಜಿಮ್ಮೆ ಆಸ್ತಿಯ ಬಗ್ಗೆ ಚಾರಿಟಿ ಕಮಿಶನರರನ್ನು ಜಿಮ್ಮೆದಾರರೆಂದು ನೇಮಿಸಿದ್ದಾಗಿದ್ದರೆ ಮೃತ್ಯುಪತ್ರ ನಡೆಸ ತಕ್ಕವರು ಮೃತ್ಯುಪತ್ರದ ಎಲ್ಲ ವಿಷಯವನ್ನು ಚಾರಿಟಿ ಕಮಿಶನರರಿಗೆ ನಿರ್ದಿಷ್ಟ ನಮೂನೆಯ ಮೇರೆಗೆ ತಿಳಿಸತಕ್ಕದ್ದು. ಚಾರಿಟಿ ಕಮಿಶನರರು ಒಪ್ಪಿದ ಮೇಲೆ ಸಾರ್ವಜನಿಕ ವಿಶ್ವಸ್ಥ ಆಸ್ತಿಯು ಅವರ ವಶವಲ್ಲಿ ಬರುವದು.

(೪೭) ಕೆಳಗೆ ಕಾಣಿಸಿದ ಕಾರಣಗಳ ಸಲುವಾಗಿ ಹೊಸ ಜಿಮ್ಮೆದಾರನ ನೇಮಣೂಕಿ ಬಗ್ಗೆ, ಸಾರ್ವಜನಿಕ ಜಿಮ್ಮೆ ಆಸ್ತಿಯಲ್ಲಿ ಹಿತವಿದ್ದವರೇ ಆಗಲಿ ಅಥವಾ ಚಾರಿಟಿ ಕಮಿಶನರರೇ ಆಗಲಿ ಕೋರ್ಟಿಗೆ ಅರ್ಜಿ ಮಾಡಿ ಕೊಳ್ಳಬಹುದು.

ಜಿಮ್ಮೆದಾರರು:—

(a) ಜಿಮ್ಮೆ ಆಸ್ತಿಯನ್ನು ತ್ಯಜಿಸಿದರೆ ಅಥವಾ ಸತ್ತರೆ

(b) ಚಾರಿಟಿ ಕಮಿಶನರ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರ ಅಥವಾ ರಾಜ್ಯ ಸರಕಾರದಿಂದ ಅಧಿಕಾರ ಹೊಂದಿದ ಯಾವದೇ ಅಧಿಕಾರಿಯಿಂದ ಪರವಾನಗಿ ಪಡೆಯದೆ ಭಾರತದಿಂದ ೬ ತಿಂಗಳ ವರೆಗೆ ಸತತವಾಗಿ ಪರದೇಶದಲ್ಲಿದ್ದರೆ

(c) ಪರರಾಷ್ಟ್ರದಲ್ಲಿ ವಾಸ ಮಾಡಲಿಕ್ಕೆ ಭಾರತ ದೇಶವನ್ನು ಬಿಟ್ಟು ಹೋಗಿದ್ದರೆ

(d) ನಾದಾರಿಯೆಂದು ಕೋರ್ಟಿನಿಂದ ಠರಾಯಿಸಲ್ಪಟ್ಟರೆ

(e) ವಿಶ್ವಸ್ಥ ಆಸ್ತಿಯಿಂದ ಮೋಕಳಿಕ ಮಾಡಬೇಕೆಂದು ಅಪೇಕ್ಷಿಸಿದರೆ

(f) ಜಿಮ್ಮೆದಾರನಾಗಿ ಕೆಲಸ ಮಾಡಲಿಕ್ಕೆ ಇನ್‌ಕಾರ ಮಾಡಿದರೆ

(g) ಕೋರ್ಟಿನ ಅಭಿಪ್ರಾಯದ ಮೇರೆಗೆ ಅಸಮರ್ಥ ಅಥವಾ ಜಿಮ್ಮೆ ಆಸ್ತಿಯ ಬಗ್ಗೆ ಕೆಲಸ ಮಾಡಲು ನಿತ್ರಾಣನಾಗಿದ್ದರೆ

(h) ೩ ನೆಯ ಪ್ರಕರಣದಲ್ಲಿ ಹೇಳಿದಂತೆ ಜಿಮ್ಮೆ ಆಸ್ತಿಯ ಆಡಳಿತ ಮಾಡಲಿಕ್ಕೆ ಆಗದಿದ್ದರೆ

(2) ಕೆಳಗೆ ಕಾಣಿಸಿದ ಕಾರಣಗಳ ಹೊರ್ತಾಗಿ ಅಂಥ ಅರ್ಜಿಯು ಮಂಜೂರ ಮಾಡಲ್ಪಡಲಾಗದು:-

(a) ಮೇಲೆ (a) ದಿಂದ (h) ದ ವರೆಗೆ ಕಾಣಿಸಿದ ವಿಷಯಗಳನ್ನು ನಿರ್ಣಯಿಸುವದಾದಲ್ಲಿ ಒಬ್ಬನಿಗಿಂತ ಹೆಚ್ಚು ಜಿಮ್ಮೆದಾರರು ಇರಬಾರದು ಅಥವಾ ವಬ್ಬರಿಗಿಂತ ಹೆಚ್ಚು ಜಿಮ್ಮೆದಾರರು ಇದ್ದಾಗ್ಗೆ ಕೋರ್ಟಿನ ಡಿಕಿ ಹುಕುಂ ಅಥವಾ ಸ್ಕಿಮಿನಲ್ಲಿ ಕಾಣಿಸಿದ ಸಂಖೆಗಿಂತ ಅಥವಾ ಜಿಮ್ಮೆದಾರನ್ನ ಪತ್ರದಲ್ಲಿ ನಿರ್ದಿಷ್ಟ ಪಡಿಸಿದ ಸಂಖೆಗಿಂತ ಕಡಿಮೆ ಆಗಿರಬೇಕು. ಇಂಥ ಪ್ರಸಂಗದಲ್ಲಿ ಮಾತ್ರ ಅರ್ಜಿಯನ್ನು ವಿಚಾರಿಸಲಾಗುವದು.

(b) (i) ಜಿಮ್ಮೆದಾರನು ಜಿಮ್ಮೆ ಆಸ್ತಿಯನ್ನು ವ್ಯವಸ್ಥೆ ಮಾಡುವ ಬಗ್ಗೆ ಸಮರ್ಥನಾಗದೇ ಇದ್ದ ಅಥವಾ ಅನುಕೂಲವುಳ್ಳವನಾಗದೇ ಇದ್ದ ತಾರೀಖಿನಿಂದ ಮೂರು ತಿಂಗಳ ಮೀರುವ ವರೆಗೆ ಮತ್ತು

(ii) ಜಿಮ್ಮೆ ಶಾಸನ ಪತ್ರದ ಮೇರೆಗೆ ಕೋರ್ಟಿನ ಡಿಕ್ರಿ, ಹುಕುಂ ಅಥವಾ ಯೋಜನೆಯ (ಸ್ಕಿಮು) ಅಥವಾ ಜಿಮ್ಮೆ ಪದ್ಧತಿ ಅಥವಾ ರೂಢಿಯ ಮೇರೆಗೆ ಮೇಲ್ಕಾಣಿಸಿದ ೩ ತಿಂಗಳ ಅವಧಿಯಲ್ಲಿ ಮೊದಲಿನ ಜಿಮ್ಮೆದಾರನ ಸ್ಥಾನದಲ್ಲಿ ಹೊಸ ಜಿಮ್ಮೆದಾರನನ್ನು ನೇಮಿಸಿದ್ದಾಗಿದ್ದರೆ

ಅಂಥ ಅರ್ಜಿಯನ್ನು ಚೌಕಸಿ ಮಾಡಲಾಗುವದಿಲ್ಲ.

(೩) ವಿಚಾರಣೆಯನ್ನು ನಡೆಸಿದ ಮೇಲೆ ಕೋರ್ಟನವರು ಖಾಲಿ ಬಿದ್ದ ಜಿಮ್ಮೆದಾರನ ಸ್ಥಾನದಲ್ಲಿ ಚಾರಿಟಿ ಕಮೀಶನರರನ್ನಾಗಲಿ ಅಥವಾ ಬೇರೆ ಯಾರನ್ನಾದರೂ ನೇಮಿಸಬಹುದು.

(೪) ಮೇಲೆ ೩ ನೇ ಕ್ಲಾಜಿನಲ್ಲಿ ಕಾಣಿಸಿದ ಮೇರೆಗೆ ಜಿಮ್ಮೆದಾರನನ್ನು ನೇಮಿಸಬೇಕಾದರೆ ಕೋರ್ಟನವರು ಕೆಳಗೆ ಕಾಣಿಸಿದ ವಿಷಯಗಳನ್ನು ಲಕ್ಷದಲ್ಲಿ ತೆಗೆದುಕೊಳ್ಳಬೇಕು.

(a) ಜಿಮ್ಮೆ ಆಸ್ತಿಯನ್ನು ಕೊಟ್ಟವರ ಉದ್ದೇಶಗಳು,

(b) ಹೊಸ ಜಿಮ್ಮೆದಾರನನ್ನು ನೇಮಿಸಲಿಕ್ಕೆ ಅಧಿಕಾರ ಹೊಂದಿದವರ ಉದ್ದೇಶಗಳು,

(c) ಯಾರನ್ನಾದರೂ ನೇಮಿಸೋಣದರಿಂದ ಜಿಮ್ಮೆ ಆಸ್ತಿಯ ಪ್ರಗತಿಯಾಗುವದೋ ಅಥವಾ ಕುಗ್ಗುವದೋ ಎಂಬ ಪ್ರಶ್ನೆಯು,

(d) ಜಿಮ್ಮೆ ಆಸ್ತಿಯಲ್ಲಿ ಹಿತವಿದ್ದ ಸಮಾಜದ ಅಥವಾ ಸಮಾಜದ ಒಂದು ಭಾಗದ ಹಿತದ ಪ್ರಶ್ನೆಯು

(e) ಜಿಮ್ಮೆಯ ಪದ್ಧತಿ ಮತ್ತು ರೂಢಿ,

(೫) ಚಾರಿಟಿ ಕಮೀಶನರರನ್ನು ಜಿಮ್ಮೆದಾರರೆಂದು ನೇಮಿಸಲ್ಪಟ್ಟರೆ ಅವರೊಬ್ಬರೇ ಜಿಮ್ಮೆದಾರರಾಗಿರತಕ್ಕದ್ದು.

(೬) ಮೇಲೆ ೩ ನೇ ಕ್ಲಾಜಿನಲ್ಲಿ ಕಾಣಿಸಿದ ಮೇರೆಗೆ ಕೊಟ್ಟ ಕೋರ್ಟಿನ ನಿರ್ಣಯವು ಕೋರ್ಟ ಡಿಕ್ರಿಯೆಂದು ತಿಳಿಯತಕ್ಕದ್ದು ಅದರ ಮೇಲೆ ಹಾಯಕೋರ್ಟಿಗೆ ಅಪೀಲು ಉಂಟು.

(೪೮) (೧) ಚಾರಿಟಿ ಕಮೀಶನರರನ್ನು ಜಿಮ್ಮೆದಾರರೆಂದು ನೇಮಿಸಿದಾಗ್ಗೆ ರಾಜ್ಯ ಸರಕಾರದವರ ಆದೇಶದ ಮೇರೆಗೆ ೧೦೦ ಕ್ಕೆ ಇಂತಿಷ್ಟು ಹಣವೆಂದು ಅಥವಾ ಬೇರೆ ರೀತಿಯಿಂದ ಆಡಳಿತೆಯ ವೆಚ್ಚವೆಂದು ಜಿಮ್ಮೆ ಆಸ್ತಿಯಿಂದ ವಸೂಲ ತೆಗೆದುಕೊಳ್ಳಲಾಗುವದು.

(೨) ಈ ಪ್ರಕಾರವಾದ ವೆಚ್ಚದ ಹಣವನ್ನು ಬೇರೆ ಬೇರೆ ಆಸಿಸ್ತಿಗಳ ಬಗ್ಗೆ ಬೇರೆ ಬೇರೆ ದರದಂತೆ ತೆಗೆದುಕೊಳ್ಳಲಾಗುವದು.

(೪೯) (೧) ತಮ್ಮ ತಾಬಾದಲ್ಲಿ ಬಂದಂಥ ಯಾವದಾದರು ಜಿಮ್ಮೆ ಆಸ್ತಿಯನ್ನು ಚಾರಿಟಿ ಕಮೀಶನರರು ಕೆಳಗೆ ಕಾಣಿಸಿದ ಜನರಿಗೆ ಬಿಟ್ಟು ಕೊಡಲಿಕ್ಕೆ ಈ ಕಾಯದೆಯಲ್ಲಿ ಯಾವ ನಿರ್ಬಂಧನೆಯಿರುವದಿಲ್ಲ.

(a) ಮೂಲ ಜಿಮ್ಮೆದಾರನಿಗೆ ಅಥವಾ

(b) ಯಾವದೇ ಕಾಯದೇಶೀರ ನೇಮಿಸಲ್ಪಟ್ಟ ಜಿಮ್ಮೇದಾರನಿಗೆ ಅಥವಾ

(c) ಕೋರ್ಟಿನಿಂದ ನೇಮಿಸಲ್ಪಟ್ಟ ಯಾವದೇ ಮನುಷ್ಯನಿಗೆ

(೨) ಈ ರೀತಿಯಾಗಿ ಚಾರಿಟಿ ಕಮೀಶನರರು ಬಿಟ್ಟುಕೊಟ್ಟಮೇಲೆ ಜಿಮ್ಮೆದಾರನ ವಶಕ್ಕೆ ಸಂಪೂರ್ಣವಾಗಿ ಅಂಥ ಜಿಮ್ಮೆ ಆಸ್ತಿಯು ಬರುವದು. ಆ ಮೇಲೆ ಚಾರಿಟಿ ಕಮೀಶನರರು ಅಂಥ ಆಸ್ತಿಯ ಜಿಮ್ಮೆದಾರನ ಹೊಣೆಗಾರಿಕೆಯಿಂದ ಮುಕ್ತರಾಗುವರು.

ಈ ಕಾಯದೇ ಮೇರಿಗೆ ಜಿಮ್ಮೆ ಆಸ್ತಿಯನ್ನು ಬಿಟ್ಟುಕೊಟ್ಟ ಮೇಲೆ ಆಡಳಿತೆಯ ವೆಚ್ಚ ಅಥವಾ ಬೇರೆ ರುಸುಮನ್ನು ಅಂಥ ಜಿಮ್ಮೆ ಆಸ್ತಿಯಿಂದ ಚಾರಿಟಿ ಕಮೀಶನರರು ಪಡೆಯಲಿಕ್ಕೆ ಹಕ್ಕುಳ್ಳವರಿರುವರು.

(೫೦) (i) ಸಾರ್ವಜನಿಕ ಜಿಮ್ಮೆ ಆಸ್ತಿಗೆ ಧಕ್ಕೆ ತಗಲುವಂತೆ ವರ್ತನೆಯಾಗಿದೆಯೆಂದು ದೂರು ಬಂದಾಗ್ಗೆ

(ii) ಯಾವದೇ ಅಸ್ತಿಯು ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟಿದೆಯೆಂದು ನಿರ್ಣಯಪಡೆಯುವದು ಅವಶ್ಯವೆನಿಸಿದಲ್ಲಿ ಅಥವಾ ಸಾರ್ವಜನಿಕ ಜಿಮ್ಮೆ ಆಸ್ತಿಗೆ ವಿರುದ್ಧವಾಗಿ ಯಾರಾದರೂ ಯಾವದೇ ಆಸ್ತಿಯನ್ನು ಉಪಭೋಗ ಮಾಡುತ್ತಿದ್ದಾಗ್ಗೆ ಅಂಥ ಅಸ್ತಿಯನ್ನು ಬಿಡಿಸಿಕೊಳ್ಳಲು ಆಜ್ಞೆಯನ್ನು ಪಡೆಯಬೇಕಾದಲ್ಲಿ ಅಥವಾ

(iii) ಯಾವದೇ ಸಾರ್ವಜನಿಕ ಜಿಮ್ಮೆ ಆಸ್ತಿಯ ಆಡಳಿತೆಯ ಬಗ್ಗೆ ಕೋರ್ಟಿನ ಆಜ್ಞೆ ಪಡೆಯುವದು ಅವಶ್ಯವೆಂದು ಕಂಡುಬಂದಲ್ಲಿ ಚಾರಿಟಿ ಕಮೀಶನರರಾಗಲಿ ಅಥವಾ ಜಿಮ್ಮೆ ಆಸ್ತಿಯಲ್ಲಿ ಹಿತವುಳ್ಳ ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚು ಜನರು ೫೧ ನೇ ಕಲಮಿನಲ್ಲಿ ಕಾಣಿಸಿದಂತೆ ಲೇಖಿಯಲ್ಲಿ ಚಾರಿಟಿ ಕಮೀಶನರರ ಪರವಾನಗಿಯನ್ನು ಪಡಕೊಂಡವರಾಗಲಿ, ಕೆಳಗೆ ಕಾಣಿಸಿದ ಬೇಡಿಕೆಗಳ ಸಲುವಾಗಿ ಹುಕುಂ ನಾಮೆ (ಡಿಕ್ರಿ) ಯನ್ನು ಪಡೆಯಲಿಕ್ಕೆ ಎಲ್ಲ ಜಿಮ್ಮೆ ಆಸ್ತಿ ಅಥವಾ ಅದರ ಕೆಲವು ಭಾಗವಾದರೂ ಯಾವ ಕೋರ್ಟಿನ ಹದ್ದಿಯಲ್ಲಿರುತ್ತದೆಯೋ ಅಂಥ ಕೋರ್ಟಿನಲ್ಲಿ ದಾವೆ (ಮೋಕದ್ದಮೆ) ಹೂಡಬಹುದು.

(a) ಅಂಥ ಆಸ್ತಿಯ ಕಬ್ಜೆಯನ್ನು ತೆಗೆದುಕೊಳ್ಳಲು ಅಜ್ಞೆಯನ್ನು ಪಡೆಯುವ ಬಗ್ಗೆ

(b) ಯಾವದೇ ಜಿಮ್ಮೆದಾರ ಅಥವಾ ವ್ಯವಸ್ಥಾಪಕನನ್ನು ತೆಗೆದು ಹಾಕಲು

(c) ಹೊಸ ಜಿಮ್ಮೆದಾರ ಮತ್ತು ವ್ಯವಸ್ಥಾಪಕರನ್ನು ನೇಮಿಸಲು

(d) ಕೆಲವು ಸಂದರ್ಭದಲ್ಲಿ ವಿಚಾರಣೆ ಮಾಡುವ ಬಗ್ಗೆ ಮತ್ತು ಲೆಖ್ಖಪತ್ರಗಳನ್ನು ನೋಡುವ ಬಗ್ಗೆ

(e) ಯಾವದೇ ಜಿಮ್ಮೆಯ ಉದ್ದೇಶಕ್ಕಾಗಿ ಜಿಮ್ಮೆ ಆಸ್ತಿಯ ಎಷ್ಟು ಭಾಗವನ್ನು ಉಪಯೋಗ ಮಾಡಬೇಕೆಂಬುದರ ಬಗ್ಗೆ ನಿರ್ಣಯ ಪಡೆಯಲಿಕ್ಕೆ

(f) ಜಿಮ್ಮೆ ಆಸ್ತಿಯ ಯಾವದೇ ಭಾಗವನ್ನು ಭಾಡಿಗಿ ವಕ್ತಿ ಮಾರಾಟ ಅಥವಾ ಅದಲು ಬದಲು ಆಜ್ಞೆಯನ್ನು ಪಡೆಯಲಿಕ್ಕೆ

(g) ಯೋಜನೆ (ಸ್ಕಿಮು) ತಯಾರಿಸಲಿಕ್ಕೆ ಅಥವಾ ಮೊದಲೇ ತಯಾರಾದ ಯೋಜನೆಯಲ್ಲಿ ಏನಾದರೂ ಬದಲಾವಣೆಯನ್ನು ಮಾಡಲಿಕ್ಕೆ

(h) ವಸ್ತು ಪರಿಸ್ಥಿತಿಯ ಮೇಲಿಂದ ಮತ್ತೇನಾದರೂ ಹೆಚ್ಚಿನ ಬೇಡಿಕೆಗಳು ಅವಶ್ಯವೆಂದು ಕಂಡುಬಂದಲ್ಲಿ ಅಂಥವುಗಳ ಬಗ್ಗೆ

ಮೇಲೆ ಕಾಣಿಸಿದ ನಿಯಮಗಳಿಗೊಳಪಡದೆ ಯಾವದೇ ಸಾರ್ವಜನಿಕ ಆಸ್ತಿಯ ಬಗ್ಗೆ ಯಾವ ದಾವೆಯನ್ನು ಮಾಡಲಿಕ್ಕೆ ಬರುವದಿಲ್ಲ

(೫೧) (೧) ಯಾವದೇ ಸಾರ್ವಜನಿಕ ಆಸ್ತಿಯಲ್ಲಿ ಹಿತವಿದ್ದ ಯಾರಾದರೂ ಮೇಲೆ ೫೦ ನೇ ಕಲಮಿನಲ್ಲಿ ಕಾಣಿಸಿದ ಮೇರೆಗೆ ದಾವೆ ಮಾಡಬೇಕೆಂದು ಇಚ್ಛಿಸಿದರೆ ಅವರು ಚಾರಿಟಿ ಕಮೀಶನರರಿಗೆ ಲೇಖಿ ಮೂಲಕ ಅರ್ಜಿ ಮಾಡಿಕೊಳ್ಳಬೇಕು. ನಂತರ ಚಾರಿಟಿ ಕಮೀಶನರರು ಅರ್ಜಿದಾರರ ಹೇಳಿಕೆಯನ್ನು ಕೇಳಿಕೊಂಡು ತಮಗೆ ಯೋಗ್ಯ ಕಂಡ ರೀತಿಯಲ್ಲಿ ವಿಚಾರಣೆ ಮಾಡಿದ ಮೇಲೆ ಅಂಥ ಅರ್ಜಿ ಮಾಡಿದ ೬ ತಿಂಗಳೊಳಗಾಗಿ ದಾವೆ ಮಾಡುವ ಬಗ್ಗೆ ಪರವಾನಗಿಯನ್ನು ಕೊಡಬಹುದು

ಅಥವಾ ಅಲ್ಲಗಳೆಯಬಹುದು. ತಮ್ಮ ಒಪ್ಪಿಗೆಯನ್ನು ಅಲ್ಲಗಳೆದಂಥ ಚಾರಿಟಿ ಕಮಿಶನರರ ಆಜ್ಞೆಯು ಲೇಖಿಯಲ್ಲಿರಬೇಕು. ಮತ್ತು ಹಾಗೆ ಅಲ್ಲಗಳೆದದ್ದಕ್ಕೆ ಕಾರಣಗಳನ್ನು ಚಾರಿಟಿ ಕಮಿಶನರರು ಕೊಡಬೇಕು.

(೨) ಚಾರಿಟಿ ಕಮಿಶನರರು ಮೇಲೆ ೧ ನೇ ಪೋಟ ಕಲಮಿನಲ್ಲಿ ಕಾಣಿಸಿದ ಮೇರೆಗೆ ಪರವಾನಗಿಯನ್ನು ಅಲ್ಲಗಳೆದದ್ದಾರೆ ಅವರ ಒಪ್ಪಿಗೆಯ ಬಗ್ಗೆ ಅರ್ಜಿಯನ್ನು ಮಾಡಿಕೊಂಡವರು ಈ ಕಾಯದೆಯಲ್ಲಿ ತೋರಿಸಿದ ಮೇರೆಗೆ ೧೯೩೯ ನೇ ಸಾಲಿನ ಮುಂಬಯಿ ರೆವಿನ್ಯೂ ಟ್ರಾಯಿಬುನಲ್ ಕಾಯದೆ ಪ್ರಕಾರ ಸ್ಥಾಪಿಸಲ್ಪಟ್ಟ ಮುಂಬಯಿ ರೆವಿನ್ಯೂ ಟ್ರಾಯಬನಲ್ಲಿಗೆ ಅಪೀಲು ಮಾಡಿಕೊಳ್ಳಬಹುದು.

(೩) ೫೦ ನೇ ಕಲಮಿನ ಮೇರೆಗೆ ಜಿಮ್ಮೆ ಆಸ್ತಿಯಲ್ಲಿ ಹಿತವಿದ್ದವರು ಮಾಡಿದ ದಾವೆದಲ್ಲಿ ಚಾರಿಟಿ ಕಮಿಶನರರು ಅವಶ್ಯ ಪಕ್ಷಗಾರರಾಗಬೇಕಾಗುವದು (ಅಂದರೆ ಚಾರಿಟಿ ಕಮಿಶನರರನ್ನು ಸೇರಿಸಿ ದಾವೆ ಮಾಡಬೇಕಾಗುವದು.)

(೪) ೭೧ ನೇ ಕಲಮಿನ ಪ್ರಕಾರ ಮುಂಬಯಿ ರೆವಿನ್ಯೂ ಟ್ರಾಯಬುನಲ್ಲಿಗೆ ಅಪೀಲು ಮಾಡಿದ್ದರಲ್ಲಿಯ ನಿರ್ಣಯಕ್ಕೆ ಆಧೀನವಾಗಿ ೧ ನೇ ಪೋಟು ಕಲಮಿನ ಪ್ರಕಾರ ಚಾರಿಟಿ ಕಮಿಶನರರ ನಿರ್ಣಯವು ಕೊನೆಯದು ಮತ್ತು ನಿರ್ಣಯಾತ್ಮಕವಾದದ್ದೂ ಇರುತ್ತದೆ.

(೫೨) ಸಾರ್ವಜನಿಕ ಜಿಮ್ಮೆ ಆಸ್ತಿಗಳಿಗೆ ಸಿವಿಲ್ ಪ್ರೋಸಿಜರ ಕೋಡಿನ ೯೨ ಮತ್ತು ೯೩ ನೇ ಕಲಮುಗಳು ಅನ್ವಯಿಸುವದಿಲ್ಲ.

ಆದರೆ ಈ ಕಾಯದೆಯು ಅನ್ವಯಿಸಲ್ಪಟ್ಟ ತಾರೀಖಿಗೆ ಯಾವದೇ ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ಯಾವದೇ ಕಲಮಿನ ಅಥವಾ ಹಾಯ ಕೋರ್ಟಿನಲ್ಲಿ ಪ್ರಕರಣಗಳು ನಡೆದಿದ್ದು ಅಂಥವುಗಳಲ್ಲಿ ಎಡ್ವೋಕೇಟ ಜನರಲ್ ಅಥವಾ ಜಿಲ್ಹಾ ಕಲೆಕ್ಟರರು ಪಕ್ಷಗಾರರು ಇದ್ದರೆ ಅವರ ಸ್ಥಾನದಲ್ಲಿ ಚಾರಿಟಿ ಕಮೀಶನರರನ್ನು ಸೇರಿಸಿದ್ದಾಗಿದೆಯೆಂದು ಗ್ರಹಿಸಿ ಕೋರ್ಟಿನವರು ಅಂಥ ಪ್ರಕರಣಗಳನ್ನು ಫೈಸಲ ಮಾಡುವರು.

(೫೩) ಯಾವದಾದರು ಮೃತ್ಯುಪತ್ರದ ಮೇರೆಗೆ ಸಾರ್ವಜನಿಕ ಜಿಮ್ಮೆಯ ಸಲುವಾಗಿ ಆಸ್ತಿಯನ್ನು ಕೊಟ್ಟಿದ್ದರೆ ಅಥವಾ ಸಾರ್ವಜನಿಕ ಜಿಮ್ಮೆ ಆಸ್ತಿಯನ್ನು ಹುಟ್ಟಿಸಿದ್ದರೆ, ಅಂಥ ಮೃತ್ಯುಪತ್ರ ನಡಿಸುವವರು ಸದ್ರಿ ಮೃತ್ಯುಪತ್ರದ ಒಂದು ನಕಲನ್ನು ಆಯಾ ಪ್ರದೇಶ ಅಥವಾ ಉಪ ಪ್ರದೇಶದ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಕಡೆಗೆ ಕಳಿಸಿ ಕೊಡುವದು ಅವರ ಕರ್ತವ್ಯವಿರುತ್ತದೆ.

(೨) ಮೇಲೆ ೧ ನೇ ಪೋಟ ಕಲಮಿನಲ್ಲಿ ಕಾಣಿಸಿದ ಮೇರೆಗೆ ಅಂಥ ಮೃತ್ಯುಪತ್ರದ ನಕಲನ್ನು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಕಡೆಗೆ ಕಳಿಸಲ್ಪಟ್ಟಿದೆಯೆಂಬದನ್ನು ಕೋರ್ಟಿನವರು ಖಾತ್ರಿ ಮಾಡಿಕೊಳ್ಳದ ವಿನಾ ಪ್ರೊಬೇಟನ್ನಾಗಲಿ ಅಥವಾ ಆಡಳಿತೆಯ ಅಧಿಕಾರ ಪತ್ರ (Letters of Administration) ಕೊಡುವದಿಲ್ಲ.

(೫) ಯಾವದೇ ಧಂದೆ ಅಥವಾ ವ್ಯಾಪಾರದ ಪದ್ಧತಿ ಮತ್ತು ರೂಢಿಯ ಮೇರೆಗೆ ಅಥವಾ ಯಾವದೇ ವ್ಯವಹಾರದ ಸಂಬಂಧವಾಗಿ ಪರ ಸ್ಪರರಲ್ಲಿ ಆದ ಕರಾರಿನ ಮೇರೆಗೆ ಧರ್ಮಾರ್ಥ ಅಥವಾ ಧಾರ್ಮಿಕ ಕಾರ್ಯ ಗಳಿಗಾಗಿ ಯಾವದೇ ಹೆಸರಿನಿಂದ ಕೂಡಿಸಿದ ಹಣವು ಜಿಮ್ಮೆದಾರ ನಾತೆ ದಿಂದ ಅಂಥ ಹಣವನ್ನು ಕೂಡಿಸುವವನ ವಶಕ್ಕೆ ಬರುವದು.

(೨) ಈ ಪ್ರಕಾರವಾಗಿ ಹಣವನ್ನು ಕೂಡಿಸುವವನು ಅಥವಾ ಕೇಳು ವವನು ವರ್ಷದ ಅಥಾವೆ ತೆಗೆದು ಲೆಖ್ಖವನ್ನು ಮುಗಿಸಿದ ತಾರೀಖಿನ ಮೂರು ತಿಂಗಳೊಳಗಾಗಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶ ನರರ ಕಡೆಗೆ ನಿರ್ದಿಷ್ಟಪಡಿಸಿದ ನಮೂನೆಯಲ್ಲಿ ಲೆಖ್ಖವನ್ನು ಸಾದರಪಡಿಸ ಬೇಕು.

(೩) ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ತಮಗೆ ಯೋಗ್ಯ ಕಂಡಂತೆ ಲೆಖ್ಖವು ಸರಿಯಾಗಿರುತ್ತದೆಯೋ ಹೇಗೆ ಎಂಬುದನ್ನು ತಪಾಸಮಾಡುವ ಅಧಿಕಾರವುಂಟು. ಮತ್ತು ಸೂಕ್ತಕಂಡ ಆಜ್ಞೆಯನ್ನು ಮಾಡಬಹುದು.

(೫೫) ಯಾವಾಗಾದರೂ ಚಾರಿಟಿ ಕಮಿಶನರರಿಗೆ:—

(a) ಸಾರ್ವಜನಿಕ ವಿಶ್ವಸ್ಥ ಆಸ್ತಿಯ ಮೂಲ ಉದ್ದೇಶವು ನಿಷ್ಫಲವಾಗಿದೆಯೆಂದೂ,

(b) ಯಾವದೇ ಸಾರ್ವಜನಿಕ ವಿಶ್ವಸ್ಥ ಆಸ್ತಿಯ ಉತ್ಪನ್ನ ಅಥವಾ ಅದರಲ್ಲಿ ಹೆಚ್ಚಾಗಿ ವುಳಿದದ್ದು ಉಪಯೋಗ ಮಾಡದಿದ್ದರೆ ಅಥವಾ ಉಪಯೋಗ ಮಾಡುವ, ಸಂಭವವಿಲ್ಲದಿದ್ದರೆ,

(c) ಸಾರ್ವಜನಿಕ ಹಿತದೃಷ್ಟಿಯಿಂದ ಸಾರ್ವಜನಿಕ ಜಿಮ್ಮೆ ಹುಟ್ಟಿಸಿದವನ ಮೂಲ ಉದ್ದೇಶವನ್ನು ಸಂಪೂರ್ಣವಾಗಲಿ ಅಥವಾ ಅದರ ಅಂಶವನ್ನಾಗಲಿ ಅಮಲಿನಲ್ಲಿ ತರುವದು, ಅವ್ಯವಹಾರಿಕವಾದರೆ, ಅವಶ್ಯವೆಂದು ಕಂಡುಬರದಿದ್ದರೆ, ಯೋಗ್ಯವೆನಿಸದಿದ್ದರೆ ಅಥವಾ ಹಿತಕರವೆನಿಸದಿದ್ದರೆ ಮತ್ತು ಆ ಆಸ್ತಿಯು ಅಥವಾ ಸಾರ್ವಜನಿಕ ಜಿಮ್ಮೆ ಆಸ್ತಿಯ ಉತ್ಪನ್ನವಾಗಲಿ ಯಾವದೇ ಧರ್ಮಾರ್ಥ ಅಥವಾ ಧಾರ್ಮಿಕ ಉದ್ದೇಶಗಳಿಗೆ ಉಪಯೋಗಿಸಲ್ಪಡಬೇಕೆಂದು ಅಭಿಪ್ರಾಯಪಟ್ಟರೆ.

(d) ೧೦ ರಿಂದ ೧೩ ಕಲಮುಗಳಲ್ಲಿ ಸ್ಪಷ್ಟೀಕರಣ ಮಾಡಿದ ಮೇರೆಗೆ ಅಥವಾ ೫೪ ನೇ ಕಲಮಿನ ಪ್ರಕಾರ ಧರ್ಮಾದಾಯ ಹಣದ ವಿನಿಯೋಗವನ್ನು ಹೇಗೆ ಮಾಡಬೇಕೆಂಬುದರ ಬಗ್ಗೆ ಕೋರ್ಟಿನ ಆಜ್ಞೆಯು ಅವಶ್ಯವೆಂದು ಕಂಡುಬಂದರೆ,

ಚಾರಿಟಿ ಕಮೀಶನರರು ಜಿಮ್ಮೆದಾರರಿಗೆ ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಕೋರ್ಟಿಗೆ ಅರ್ಜಿ ಮಾಡಿ ಆಜ್ಞೆಯನ್ನು ಪಡೆಯಲಿಕ್ಕೆ ಲೇಖಿಯಿಂದ ಸೂಚನೆ ಕೊಡುವರು.

(೨) ೧ ನೇ ಪೋಟ ಕಲ್ಮದಲ್ಲಿ ಹೇಳಿದಂತೆ ಜಿಮ್ಮೇದಾರರು ಅರ್ಜಿ ಮಾಡಲಿಕ್ಕೆ ತಪ್ಪಿದರೆ ಅಥವಾ ಸಾರ್ವಜನಿಕ ಜಿಮ್ಮೇಕ್ಕೆ ಸ್ವತಃ ಟ್ರಸ್ಟಿ ಇದ್ದರೆ ಅಥವಾ ಸಾರ್ವಜನಿಕ ಜಿಮ್ಮೆಕ್ಕೆ ಯಾರೂ ಜಿಮ್ಮೆದಾರರಿರದಿದ್ದರೆ ಚಾರಿಟಿ ಕಮೀಶನರರು ಕೋರ್ಟಿಗೆ ಅರ್ಜಿಮಾಡಿಕೊಳ್ಳುವರು.

(೫೬) ಈ ಪ್ರಕಾರವಾಗಿ ಅರ್ಜಿ ಮಾಡಿದ ಮೇಲೆ ಕೋರ್ಟಿನವರು ಉಭಯ ಪಕ್ಷದವರನ್ನು ವಿಚಾರಿಸಿ ಮತ್ತು ಚೌಕಸಿ ಮಾಡಿ ನಿರ್ಣಯ

ಕೊಡುವರು. ಕೋರ್ಟಿನವರು ನಿರ್ಣಯಿಸುವಾಗ್ಗೆ ಸಾರ್ವಜನಿಕ ಜಿಮ್ಮೆಯು ಯಾವ ಉದ್ದೇಶದ ಸಲುವಾಗಿ ಹುಟ್ಟಿದೆ ಅಥವಾ ಸಾರ್ವಜನಿಕ ಜಿಮ್ಮೆಯನ್ನು ಹುಟ್ಟಿಸಿದವನ ಮೂಲ ಉದ್ದೇಶವು, ಆದಷ್ಟು ಸಾರ್ವಜನಿಕ ಹಿತದೃಷ್ಟಿಯಿಂದ ಯೋಗ್ಯ, ವ್ಯವಹಾರಿಕ,ಹಿತಕಾರಕವಾಗುವಂತೆ ನೋಡಬೇಕಾಗುತ್ತದೆ.

ಆದರೆ ಅಂಥ ಉದ್ದೇಶವನ್ನು ಸಾಧಿಸುವದು ಸಾರ್ವಜನಿಕ ಹಿತದೃಷ್ಟಿಯಿಂದ ಒಟ್ಟಿನಲ್ಲಿ ಅಥವಾ ಅಂಶತಃ ಯೋಗ್ಯ ವ್ಯವಹಾರಿಕ ಹಿತಕಾರಕ ಅಥವಾ ಸೂಕ್ತವಾದದ್ದು ಆಗುವದಿಲ್ಲವೆಂದು ಕೋರ್ಟಿಗೆಕಂಡುಬಂದಲ್ಲಿ ಕೋರ್ಟಿನವರು ಅದೇ ಪ್ರಕಾರದ ಬೇರೆ ಜಿಮ್ಮೆಕ್ಕೆ ಅದರ ಉತ್ಪನ್ನ ಅಥವಾ ಅದರ ಭಾಗವನ್ನು ಉಪಯೋಗ ಮಾಡುವಂತೆ ಅಪ್ಪಣೆ ಮಾಡಬಹುದು. ಹೀಗೆ ಅಪ್ಪಣೆ ಹೊರಡಿಸುವಾಗ್ಗೆ ಈ ಮೊದಲು ಯಾವದೇ ಯೋಜನೆಯು ರಚಿಸಲ್ಪಟ್ಟಿದ್ದರೆ ಅಥವಾ ಸಾರ್ವಜನಿಕ ಜಿಮ್ಮೆ ವಿಷಯದಲ್ಲಿ ಮಾಡಿದ ಡಿಕ್ರಿ ಅಥವಾ ಆಜ್ಞೆಯಲ್ಲಿ ಬದಲಾವಣೆ ಮಾಡುವದಿದ್ದರೆ ಹಾಗೆ ಬದಲಾವಣೆ ಮಾಡಲಿಕ್ಕೆ ಕೋರ್ಟಿಗೆ ಅಧಿಕಾರವುಂಟು.

(೨) ೧ ನೇ ಪೋಟಕಲ್ಮದ ಮೇರೆಗೆ ಕೋರ್ಟಿನವರು ಮಾಡಿದ ಆಜ್ಞೆಯು ಅಥವಾ ನಿರ್ಣಯವು ಅಂಥ ಕೋರ್ಟಿನ ಡಿಕ್ರಿಯಾಗಿ ಪರಿಣಮಿಸುವದು ಮತ್ತು ಅಂಥ ಆಜ್ಞೆಯ ವಿರುದ್ಧವಾಗಿ ಹಾಯಕೋರ್ಟಿಗೆ ಅಪಿಲು ಮಾಡಬಹುದು.

## ೮ ನೇ ಪ್ರಕರಣ

(೫೭) ೧) ಸಾರ್ವಜನಿಕ ಜಿಮ್ಮೆಗಳ ಆಡಳಿತೆಯ ನಿಧಿಯೆಂಬ ಹಣವನ್ನು ಕಾಯ್ದಿಡಲಾಗುವದು. ಈ ನಿಧಿಯು ಚಾರಿಟಿ ಕಮೀಶನರರ ಅಧಿಪತ್ಯದಲ್ಲಿರುವದು.

ಈ ನಿಧಿಗೆ ಕೆಳಗೆ ಕಾಣಿಸಿದ ಹಣವು ಜಮಾ ಆಗುವದು.

(a) ೧೫ ಮತ್ತು ೪೮ ನೇ ಕಲಮುಗಳ ಮೇರೆಗೆ ಆಡಳಿತೆಯ ವೆಚ್ಚದ ಹಣ ಮತ್ತು ರುಸುಮು (fees)

(b) ೫೮ ನೇ ಕಲಮಿನ ಮೇರೆಗೆ ವಸೂಲಾದ ವಂತಿಗೆ ಹಣ

(c) ೬೧ ನೇ ಕಲಮಿನ ಮೇರೆಗೆ ಜಮಾಹಿಡಿದ ನಿಧಿಯಲ್ಲಿಯ ಹಣ

(d) ಖಾಸಗಿ ಮನುಷ್ಯನಿಂದ ವಸೂಲಾದ ಹಣ

(e) ರಾಜ್ಯ ಸರಕಾರದಿಂದ ಅಥವಾ ಸ್ಥಾನಿಕ ಅಧಿಕಾರಿಗಳಿಂದ ಬಂದ ಹಣ ಮತ್ತು

(f) ಈ ಕಾಯದೆ ಮೇರೆಗೆ ಜಮಾ ಮಾಡಬೇಕೆಂದು ನಿರ್ದಿಷ್ಟಪಡಿಸಿದ ಹಣ.

(೫೮) ಪ್ರತಿಯೊಂದು ಸಾರ್ವಜನಿಕ ಜಿಮ್ಮೆ ಆಸ್ತಿಯ ಮೇಲಿನ ಸಾರ್ವಜನಿಕ ಜಿಮ್ಮೆಗಳ ಆಡಳಿತೆಯು ನಿಧಿಗೆ ನಿರ್ಧಿಷ್ಟಪಡಿಸಿದ ರೀತಿಯಲ್ಲಿ ಮತ್ತು ತಾರೀಖಿಗೆ ಪ್ರತಿವರ್ಷ ಅಧಿಕಾರಯುಕ್ತವಾಗಿ ಸೂಚಿಸಿದ ಮೇರೆಗೆ ವಂತಿಗೆ ಹಣವನ್ನು ಕೊಡುವ ಹೊಣೆ ಯಿರುತ್ತದೆ. ಈ ಪ್ರಕಾರ ಕೊಡುವ ವಂತಿಗೆ ಹಣವನ್ನು ಜಿಮ್ಮೆ ಆಸ್ತಿಯ ವಾರ್ಷಿಕ ಉತ್ಪನ್ನದ ಮೇಲಿಂದ ನಿರ್ಧರಿಸಲಾಗುವದು.

(೫೯) ಸಾರ್ವಜನಿಕ ಜಿಮ್ಮೆದ ಜಿಮ್ಮೆದಾರರು ೫೮ ನೇ ಕಲಮಿನ ಮೇರೆಗೆ ವಂತಿಗೆ ಹಣವನ್ನು ಕೊಡಲಿಕ್ಕೆ ತಪ್ಪಿದರೆ ೬೬ ನೇ ಕಲಮಿನ ಮೇರೆಗೆ ಅವರು ದಂಡವನ್ನು ಕೊಡಬೇಕಾಗುವದು (ಈ ನಿಯಮವು ಚಾರಿಟಿ ಕಮೀಶನರರು ಜಿಮ್ಮೆದಾರರಿದ್ದರೆ ಅನ್ವಯಿಸುವದಿಲ್ಲ.)

(೬೦) ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಹಣವು ಯಾವದಾದರೂ ಬ್ಯಾಂಕಿನಲ್ಲಿಯಾಗಲಿ ಅಥವಾ ಯಾವದೇ ವ್ಯಕ್ತಿಯ ಹತ್ತರ ಆಗಲಿ ಠೇವಾಗಿ ಇಡಲ್ಪಟ್ಟಿದ್ದರೆ, ಅಂಥ ಹಣದಿಂದ ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ವಂತಿಗೆ ಹಣವನ್ನು ಕೊಡಲಿಕ್ಕೆ ಚಾರಿಟಿ ಕಮೀಶನರರು ಆಜ್ಞೆಮಾಡಬಹುದು. ಇಂಥ ಆಜ್ಞೆಯನ್ನು ಠೇವು ಇಟ್ಟುಕೊಂಡ ಸದ್ರಿ ಬ್ಯಾಂಕು ಅಥವಾ ವ್ಯಕ್ತಿಯು ಪಾಲಿಸಬೇಕು.

(೬೧) ಮೇಲೆ ೬೦ ನೇ ಪೋಟ ಕಲಮಿನ ಮೇರೆಗೆ ಮಾಡಿದ ಹುಕುಮಿನ ವಿರುದ್ಧವಾಗಿ ಯಾವದೇ ಬ್ಯಾಂಕು ಅಥವಾ ವ್ಯಕ್ತಿಯು ರಾಜ್ಯ ಸರ

ಕಾರಕ್ಕೆ ಅಪಿಲು ಮಾಡಿಕೊಳ್ಳಬಹುದು. ಮತ್ತು ರಾಜ್ಯ ಸರಕಾರದವರು ಯೋಗ್ಯಕಂಡ ಮೇರೆಗೆ ವಿಚಾರಣೆ ಮಾಡಿದ ನಂತರ ಅಂಥ ಆಜ್ಞೆಯನ್ನು ಕಾಯಂ, ಬದಲು ಅಥವಾ ರದ್ದು ಮಾಡಬಹುದು.

(೬೦) (೧) ಈ ಕಾಯದೆಯ ಕಲಮುಗಳಿಗೆ ಮತ್ತು ಮುಂಬಯಿ ರಾಜ್ಯ ಸರಕಾರದ ಸಾಮಾನ್ಯ ಅಥವಾ ವಿಶೇಷ ಆಜ್ಞೆಗಳಿಗೆ ಅಧೀನವಾಗಿ ಸಾರ್ವಜನಿಕ ವಿಶ್ವಸ್ಥ ಆಸ್ತಿಗಳ ಆಡಳಿತೆಯ ನಿಧಿಯು ಸಾರ್ವಜನಿಕ ಜಿಮ್ಮೆಗಳ ಸುವ್ಯವಸ್ಥೆಯ ಬಗ್ಗೆ ಬೇಕಾದ ಖರ್ಚಿಗಾಗಿ ಮತ್ತು ಈ ಕಾಯದೆ ನಿಯಮುಗಳನ್ನು ಅಮಲಿನಲ್ಲಿ ತರುವ ಬಗ್ಗೆ ಉಪಯೋಗಿಸಲ್ಪಡುವದು.

(೨) ಸಾರ್ವಜನಿಕ ಜಿಮ್ಮೆಗಳ ಆಡಳಿತೆ ನಿಧಿಗೆ ಜಮಾ ಆಗತಕ್ಕ ಹಣದ ತಾಬಾ ಮತ್ತು ಉಪಯೋಗ ಮತ್ತು ವೆಚ್ಚ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಆಗುವದು.

(೬೧) "ಅ" ಪರಿಶಿಷ್ಟದಲ್ಲಿ ಕಾಣಿಸಿದ ಕಾಯದೆಗಳಲ್ಲಿ ಯಾವದಾದರೊಂದು ಕಾಯದೇ ಮೇರೆಗೆ ನೋಂದಾಯಿಸಲ್ಪಟ್ಟ ಸಾರ್ವಜನಿಕ ಜಿಮ್ಮೆಕ್ಕೆ ಅಥವಾ ಸಾರ್ವಜನಿಕ ಜಿಮ್ಮೆಗಳ ವರ್ಗಕ್ಕೆ ಈ ಕಾಯದೆಯು ಅನ್ವಯಿಸಲ್ಪಟ್ಟ ಮೇಲೆ ಆಯಾ ಪ್ರದೇಶ ಅಥವಾ ಉಪ ಪ್ರದೇಶದಲ್ಲಿದ್ದ ಹಿಂದಿನ ಸದ್ರಿ ಕಾಯದೆ ಮೇರೆಗೆ ಸಾರ್ವಜನಿಕ ಜಿಮ್ಮೆ ಆಸ್ತಿಗಳ ಆಡಳಿತೆಯ ಸಲುವಾಗಿ ಕಾಯ್ದಿಡಲ್ಪಟ್ಟ ನಿಧಿಯು ಈ ಪ್ರಕರಣದಲ್ಲಿ ವರ್ಣಿಸಿದ ಸಾರ್ವಜನಿಕ ಜಿಮ್ಮೆಗಳ ಆಡಳಿತೆಯ ನಿಧಿಗೆ ಜಮಾ ಮಾಡಲ್ಪಡಬೇಕೆಂದು ರಾಜ್ಯ ಸರಕಾರವು ಆಜ್ಞೆಯನ್ನು ಹೊರಡಿಸಬಹುದು.

## ೯ ನೇ ಪ್ರಕರಣ

(೬೨) (೧) ನಿರ್ದಿಷ್ಟಪಡಿಸಿದ ತಾರೀಖಿಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಸಲಹೆಗಾರರಾಗಿ (ಅಸೆಸರರಾಗಿ) ಕೆಲಸ ಮಾಡಲಿಕ್ಕೆ ಯೋಗ್ಯರಾದ (ತಕ್ಕಂಥ) ಜನರ ಹೆಸರಿನ ಪಟ್ಟಿಗಳನ್ನು ತಯಾರಿಸುವರು.

(೨) ಈ ಬಗ್ಗೆ ರಚಿಸಲ್ಪಟ್ಟ ನಿಯಮ ಬಾಹ್ಯವಾಗದ ಹೊರ್ತು ೨೫ ರಿಂದ ೬೫ ವರ್ಷಗಳ ನಡುವಿನ ಪ್ರತಿಯೊಬ್ಬ ಮನುಷ್ಯನು ಈ ಕಾಯದೆ

ಮೇರೆಗೆಸಲಹೆಗಾರನಾಗಿ ಕೆಲಸ ಮಾಡಲು ಜವಾಬ್ದಾರಿಯುಳ್ಳವನಿರುತ್ತಾನೆ.

(೩) ಹೆಸರಿನ ಪಟ್ಟಿಗಳನ್ನು ತಯಾರಿಸುವಾಗ್ಗೆ ಯಾರ ಹೆಸರುಗಳು ನಮೂದ ಮಾಡಲ್ಪಟ್ಟವೆಯೋ ಅಂಥವರ ಆಸ್ತಿ, ನಡತೆ, ವಿದ್ಯಾಭ್ಯಾಸ, ಮತ್ತು ಧರ್ಮ ಇವೆಲ್ಲವುಗಳನ್ನು ವಿಚಾರ ಮಾಡಲಾಗುವದು.

(೪) ಈ ಪ್ರಕಾರವಾಗಿ ತಯಾರಿಸಲ್ಪಟ್ಟ ಪಟ್ಟಿಗಳನ್ನು ಮೊದಲು ಚಾರಿಟಿ ಕಮೀಶನರರ ಕಡೆಗೆ ಕಳಿಸಲಾಗುವದು. ಅವರ ಸಮ್ಮತಿ ದೊರೆತ ಮೇಲೆ ಸರಕಾರಿ ಗ್ಯಾಜೆಟ್ಟಿನಲ್ಲಿ ಅವು ಪ್ರಸಿದ್ಧಿಸಲ್ಪಡುವವು.

(೫) ೪ ನೇ ಪೋಟ ಕಲಮದ ಮೇರೆಗೆ ತಯಾರಿಸಲ್ಪಟ್ಟ ಪಟ್ಟಿಗಳು ೩ ವರ್ಷಗಳವರೆಗೆ ಅಮಲಿನಲ್ಲಿರುವವು.

ಆದರೆ ಚಾರಿಟಿ ಕಮಿಶನರರು ಈ ಅವಧಿಯಲ್ಲಿ ಅಂಥ ಹೆಸರಿನ ಪಟ್ಟಿಗಳಲ್ಲಿ ಬದಲಾವಣೆ ಮಾಡಬಹುದು ಅಥವಾ ಹೆಚ್ಚಿಗೆ ಹೆಸರುಗಳನ್ನು ಸೇರಿಸಬಹುದು.

(೬) ೪ ನೇ ಪೋಟ ಕಲಮಿನ ಮೇರೆಗೆ ತಯಾರಿಸಲ್ಪಟ್ಟ ಪಟ್ಟಿಯು ೫ ನೇ ಪೋಟ ಕಲಮಿನಲ್ಲಿ ಏನೇ ಬರೆಯಲ್ಪಟ್ಟಾಗ್ಯೂ ಶಾಸನ ಬದ್ಧವಾದದ್ದು ಮತ್ತು ಒಂದು ವರ್ಷ ಹೆಚ್ಚಿನ ಅವಧಿಯ ವರೆಗೆ ಅಥವಾ ಹೊಸ ಪಟ್ಟಿಗಳು ತಯಾರಾಗುವವರೆಗೆ ಇವೆರಡರಲ್ಲಿ ಯಾವ ಅವಧಿಯು ಕಡಿಮೆ ಆಗುತ್ತದೆಯೋ ಅಲ್ಲಿಯವರೆಗೆ ಅಮಲಿನಲ್ಲಿ ಉಳಿಯುತ್ತದೆ.

(೬೩) ಯೋಗ್ಯ ಕಾರಣದಿಂದ ಹಾಜರಾಗಲು ಅಡ್ಡಿ ಆಗದ ವಿನಾ ಪ್ರತಿಯೊಬ್ಬ ಅಸೆಸರರು [ಸಲಹೆಗಾರರು] ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಂದ ಸಮನು ಬಂದ ಮೇಲೆ ಯಾವ ಸ್ಥಳಕ್ಕೆ ಬರಲಿಕ್ಕೆ ಸಮನು ಆಗಿರುತ್ತದೆಯೋ ಅಂಥ ಸ್ಥಳಕ್ಕೆ ಮತ್ತು ಸರಿಯಾದ ವೇಳೆಗೆ ಹಾಜರ ಆಗತಕ್ಕದ್ದು.

(೬೪) ಕೆಳಗೆ ಕಾಣಿಸಿದ ವ್ಯಾಜ್ಯಗಳಲ್ಲಿ ಚಾರಿಟಿ ಕಮಿಶನರರಿಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ಸಹಾಯ ಮತ್ತು ಸಲಹೆ ಕೊಡುವ ಬಗ್ಗೆ ಸಲಹೆಗಾರರು ಕರಿಸಲ್ಪಡುವರು.

(a) ೧೯ ನೇ ಕಲಮಿನ ಮೇರೆಗೆ ಸಾರ್ವಜನಿಕ ವಿಶ್ವಸ್ತ ಆಸ್ತಿಯ ನೋಂವಣೆ ಬಗ್ಗೆ ವಿಚಾರಣೆ ನಡಿಸುವದಕ್ಕಾಗಿ ಅಥವಾ ೧೨ ನೇ ಕಲಮಿನ

ಮೇರೆಗೆ ಯಾವದೇ ವಿಷಯಗಳಲ್ಲಿ ಬದಲಾವಣಿ ಮಾಡುವ ಬಗ್ಗೆ ವಿಚಾರಣೆ ನಡಿಸಲಿಕ್ಕೆ

(b) ೨೮ ನೇ ಕಲಮಿನ ಮೇರೆಗೆ ಪರಿಶಿಷ್ಟದಲ್ಲಿ ನಮೂದಿಸಿದ ಕಾನೂನುಗಳ ಮೇರೆಗೆ ನೊಂದಣಿ ಮಾಡಲ್ಪಟ್ಟ ಸಾರ್ವಜನಿಕ ಜಿಮ್ಮೆಗಳಲ್ಲಿ ಯಾವದೇ ಜಿಮ್ಮೆಯ ಬಗ್ಗೆ ವಿಚಾರಣೆ ಮಾಡಲಿಕ್ಕೆ

(c) ೪೦ ನೇ ಕಲಮಿನ ಮೇರೆಗೆ ಯಾವದೇ ಸಾರ್ವಜನಿಕ ಜಿಮ್ಮೆ ಆಸ್ತಿಗೆ ಜಿಮ್ಮೇದಾರರ ವರ್ತನೆ ಮತ್ತು ಕೃತಿಯಿಂದ ಹಾನಿ ತಟ್ಟಿದ ಬಗ್ಗೆ ವಿಚಾರ ಮಾಡುವ ಕುರಿತು

(d) ರಾಜ್ಯ ಸರಕಾರದವರು ಮಾಡಿದ ಸಾಮಾನ್ಯ ಅಥವಾ ವಿಶೇಷ ಹುಕುಮಿನ ಮೇರೆಗೆ ಅಥವಾ ನಿಯಮಗಳ ಮೇರೆಗೆ ಚಾರಿಟಿ ಕಮಿಶನರರಿಗೆ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ಅಥವಾ ಸರಕಾರದವರು ನೇಮಿಸಲ್ಪಟ್ಟ ಯಾವದೇ ಅಧಿಕಾರಿಗಳಿಗೆ ಯಾವದೇ ವಿಚಾರಣೆಯಲ್ಲಿ ಸಹಾಯ ಮತ್ತು ಸಲಹೆ ಕೊಡುವದಕ್ಕೆ ಸಲಹೆಗಾರರು ಅವಶ್ಯವಾಗಿ ಬೇಕಾಗಿರುತ್ತದೆ ಎಂದು ಕಂಡು ಬಂದಲ್ಲಿ

(೬೫) (೧) ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಯಾವದೇ ವಿಚಾರಣೆ ಕಾಲಕ್ಕೆ ತಮಗೆ ಯೋಗ್ಯ ಕಂಡಂತೆ ತಮಗೆ ಸಹಾಯ ಮಾಡಲಿಕ್ಕೆ ೫ ರ ಕಿಂತ ಹೆಚ್ಚು ಮತ್ತು ೩ ರ ಕಿಂತ ಕಡಿಮೆ ಅಲ್ಲದಷ್ಟು ಸಲಹೆಗಾರರನ್ನು ಆರಿಸಿಗೊಳ್ಳಬಹುದು. ಯಾವದೇ ಒಂದು ಧರ್ಮದ ಜನರ ಹಿತದ ಸಲುವಾಗಿ ಒಂದು ಸಾರ್ವಜನಿಕ ಜಿಮ್ಮೆ ಬಗ್ಗೆ ವಿಚಾರಣೆ ಮಾಡುವ ಕಾಲಕ್ಕೆ ಸಾಧ್ಯವಿದ್ದಷ್ಟು ಮಟ್ಟಿಗೆ ಅದೇ ಧರ್ಮಕ್ಕೆ ಸಂಬಂಧಪಟ್ಟ ಜನರನ್ನು ಸಲಹೆಗಾರರನ್ನಾಗಿ ತೆಗೆದುಕೊಳ್ಳಲ್ಪಡುವದು.

(೨) ವಿಚಾರಣೆಯು ಮುಗಿದೊಡನೆಯೇ ಲೇಖಿಯಲ್ಲಿ ಅವರ ಅಭಿಪ್ರಾಯವನ್ನು ಅವರು ಬರೆದುಕೊಂಡು ಅವರ [ಸಲಹೆಗಾರರ] ಸಹಿ ತೆಗೆದುಕೊಳ್ಳುವರು. ಆ ಮೇರೆಗೆ ಕೊಟ್ಟ ಅಭಿಪ್ರಾಯವು ಪ್ರಕರಣದ ಒಂದು ಭಾಗವಾಗಿವುಳಿಯುವದು. ವಿಚಾರಣೆಯಲ್ಲಿ ಮುಂದೆ ವರದಿ ಮಾಡುವಾಗ್ಗೆ ಒಂದು ನಿರ್ಣಯಕ್ಕೆ ಬರುವಾಗ್ಗೆ ಅಥವಾ ಕೊನೆಯ ಹುಕುಮನ್ನು ಮಾಡುವಾಗ್ಗೆ ಅವರ ಅಭಿಪ್ರಾಯವನ್ನು ಪೂರ್ಣ ಲಕ್ಷದಲ್ಲಿ ತೆಗೆದುಕೊಳ್ಳುವರು.

(೩) ಯಾವದೇ ವಿಚಾರಣೆಯು ಕೊನೆಗೊಳ್ಳುವ ಪೂರ್ವದಲ್ಲಿ ವಿಚಾರಣೆ ನಡೆದ ಕಾಲಕ್ಕೆ ಯಾವದೇ ಸಲಹೆಗಾರರು ಸಾಕಷ್ಟು ಕಾರಣಗಳಿಂದ ವಿಚಾರಣೆಯು ಮುಗಿಯುವ ವರೆಗೆ ಹಾಜರ ಆಗಲಿಕ್ಕೆ ಅಡ್ಡಿಯಾಗಿದ್ದರೆ ಅಥವಾ ಗೈರ ಹಾಜರ ಆದರೆ ಅಥವಾ ಅವರನ್ನು ಹಾಜರ ಪಡಿಸಿಕೊಳ್ಳುವದು ಅಸಂಭವವಿದ್ದರೆ ಉಳಿದ ಸಲಹೆಗಾರನ ಅಥವಾ ಸಲಹೆಗಾರರ ಸಹಾಯದಿಂದ ವಿಚಾರಣೆಯು ನಡೆಯುವದು.

(೪) ಎಲ್ಲ ಸಲಹೆಗಾರರು ಸಾಕಷ್ಟು ಕಾರಣಗಳಿಲ್ಲದೆ ಗೈರ ಹಾಜರ ಆಗಿದ್ದರೆ ಅಥವಾ ಹಾಜರ ಆಗಲಿಕ್ಕೆ ಯಾವದೇ ರೀತಿಯಿಂದ ಅಶಕ್ತರಾಗಿದ್ದರೆ ಬೇರೆ ಸಲಹೆಗಾರರನ್ನು ನೇಮಿಸಿಕೊಂಡು ಮುಂದಿನ ಕೆಲಸವನ್ನು ಅವರು ನಡಿಸುವರು.

ಆದರೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾಂಟಿ ಕಮಿಶನರರು ಯೋಗ್ಯ ಮತ್ತು ಸಾಕಷ್ಟು ಕಾರಣಗಳ ಸಲುವಾಗಿ ವಿಚಾರಣೆಯನ್ನು ಮುಂದೆ ಹಾಕತಕ್ಕದ್ದಲ್ಲವೆಂದು ಅಭಿಪ್ರಾಯಪಟ್ಟರೆ ಅವರು ವಿಚಾರಣೆಯನ್ನು ಮುಗಿಸಿ ಚಾಂಟಿ ಕಮೀಶನರರ ಕಡೆಗೆ ಆ ವಿಷಯವನ್ನು ವರದಿ ಮಾಡಿಕೊಳ್ಳುವರು.

(೫) ನಿರ್ದಿಷ್ಟ ಪಡಿಸಿದಂತೆ ಸಲಹೆಗಾರರಿಗೆ ಭತ್ತೆ ದೊರೆಯುವದು.

## ೧೦ ನೇ ಪ್ರಕರಣ

(೬೬) ಕೆಳಗೆ ಕೊಟ್ಟ ಕೋಷ್ಟಕದೊಳಗಿನ ೧ ನೇ ಸಾಲಿನಲ್ಲಿ ನಮೂದ ಮಾಡಿದ ಕಲಮುಗಳಲ್ಲಿ ಯಾವದೇ ಕಲಮಿನ ತತ್ವವನ್ನು ಯಾರಾದರೂ ಉಲ್ಲಂಘಿಸಿದರೆ ಅದೇ ಕೋಷ್ಟಕದಲ್ಲಿ ೩ ನೇ ಸಾಲಿನಲ್ಲಿ ಆಯಾ ಕಲಮುಗಳ ಬಗ್ಗೆ ನಮೂದಿಸಿದಂತೆ ಶಿಕ್ಷೆಯಾಗಿ ಅಷ್ಟರ ವರೆಗೆ ದಂಡವನ್ನು ಕೊಡಬೇಕಾಗುವದು.

**ವಿವರಣೆ:**— ಸದ್ರಿ ಕೋಷ್ಟಕದಲ್ಲಿ ೨ ನೇ ಸಾಲಿನಲ್ಲಿ ವಿಷಯವೆಂಬ ಶಿರೋಲೇಖದ ಕೆಳಗೆ ಬರೆದ ವಿಷಯವು ಆಯಾ ಕಲಮುಗಳ ಸಂಪೂರ್ಣ ವಿವರಣೆ ಇರುವದಿಲ್ಲ ಆದರೆ ಕಲಮುಗಳ ಸಂಕ್ಷಿಪ್ತ ಸೂಚಕ ವಿಷಯಗಳು ಇರುತ್ತವೆ.

# ಕೋಷ್ಟಕ

| ಕಲಮು | ವಿಷಯಗಳು | ವಿಧಿಸುವ ದಂಡ |
| --- | --- | --- |
| ೧ | ೨ | ೩ |
| ಕಲಮು ೧೮ | ನಿರ್ದಿಷ್ಟ ಪಡಿಸಿದ ಅವಧಿಯಲ್ಲಿ ಜಿಮ್ಮೆದಾರನು ನೋಂದಾಯಿಸುವ ಬಗ್ಗೆ ಅರ್ಜಿ ಮಾಡುವದು ಅವನ ಕರ್ತವ್ಯ | ೧೦೦೦/- |
| ಕ. ೨೨ | ಬದಲಾವಣೆ ಆದಾಗ್ಗೆ ವರದಿ ಮಾಡದಿದ್ದರೆ | ೧೦೦೦/- |
| ಕ. ೨೭ | ಹಕ್ಕಿನ ಕಾಗದಗಳ ಮೇಲೆ ಮುದ್ರೆ ಅಥವಾ ಸಹಿ ಮಾಡುವದು ಜಿಮ್ಮೆದಾರನ ಕರ್ತವ್ಯ. | ೧೦೦೦/- |
| ಕ. ೨೯ | ನಿರ್ದಿಷ್ಟ ಪಡಿಸಿದ ಅವಧಿಯಲ್ಲಿ ಮೃತ್ಯುಪತ್ರ ನಡಿಸತಕ್ಕವನು ಸಾರ್ವಜನಿಕ ಜಿಮ್ಮೆಯನ್ನು ನೋಂದಣಿ ಮಾಡಿಸಲಿಕ್ಕೆ ಅರ್ಜಿ ಮಾಡುವದು ಜಿಮ್ಮೆದಾರನ ಕರ್ತವ್ಯ. | ೧೦೦೦/- |
| ಕ. ೩೨ | ವ್ಯವಹಾರ ಸಿರಸ್ತೆ ಪ್ರಕಾರ ಲೆಕ್ಕ ಇಡುವ ಕರ್ತವ್ಯ. | ೧೦೦೦/- |
| ಕ. ೩೫ | ಭದ್ರವಾದ ಅಡವುಗಳಲ್ಲಿ ಹಣವನ್ನು ತೊಡಗಿಸಲು ತಪ್ಪಿದರೆ ಅಥವಾ ಬಿಟ್ಟು ಬಿಟ್ಟರೆ | ೧೦೦೦/- |
| ಕ. ೫೯ | ೫೮ ನೇ ಕಲ್ಮಿನ ಮೇರೆಗೆ ವಂತಿಗೆ ಹಣವನ್ನು ಕೊಡಲು ತಪ್ಪಿದರೆ (ಚಾಂಟಿ ಕಮೀಶನರರಿಗೆ ಅನ್ವಯಿಸುವದಿಲ್ಲ) | ೧೦೦೦/- |
| ಕ. ೬೩ | ಸಲಹೆಗಾರನು ಹಾಜರ ಆಗುವದು ಅವಶ್ಯವಿದ್ದರೆ | ೫೦೦/- |

(೬೭) ಪ್ರತ್ಯೇಕವಾಗಿ ದಂಡ ವಿಧಿಸಲ್ಪಡದೆ ಇದ್ದ ಯಾವದೇ ಕಲಮಿನ ತತ್ವವನ್ನು ಅಥವಾ ನಿಯಮವನ್ನು ಉಲ್ಲಂಘಿಸಿದರೆ ಅಂಥವರಿಗೆ ಶಿಕ್ಷೆಯಿಂದ ೫೦೦ ರೂಪಾಯಿಗಳ ವರೆಗೆ ದಂಡವನ್ನು ವಿಧಿಸಲಾಗುವದು.

## ೧೧ ನೇ ಪ್ರಕರಣ

(೬೮) ಈ ಕಾಯದೆ ಮಟ್ಟಿಗೆ ಕೆಳಗೆ ಕಾಣಿಸಿದ ಮೇರೆಗೆ ಪ್ರದೇಶ ಅಥವಾ ಉಪ ಪ್ರದೇಶಗಳಿಗೆ ನೇಮಿಸಲ್ಪಟ್ಟ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ತಮ್ಮ ಕರ್ತವ್ಯವನ್ನು ನಡಿಸುವರು.

(a) ೧೭ ನೇ ಕಲ್ಮಿನಲ್ಲಿ ನಿರ್ದಿಷ್ಟ ಪಡಿಸಿದಂತೆ ಪುಸ್ತಕಗಳನ್ನು ದಾಖಲೆಗಳನ್ನು ಬೇರೆ ದಸ್ತ ವೈಜುಗಳನ್ನು ಇಡುವದು.

(b) ೧೯ ಮತ್ತು ೨೨ ನೇ ಕಲಮುಗಳ ಮೇರೆಗೆ ವಿಚಾರಣೆ ನಡೆಸುವದು.

(c) ೧೭ ನೇ ಕಲಮಿನ ಮೇರೆಗೆ ಇಟ್ಟ ನೋಂದಣಿ ಬುಕ್ಕಿನಲ್ಲಿ ದಾಖಲೆ ಮಾಡುವದು ಮತ್ತು ೨೨ ನೇ ಕಲಮಿನ ಮೇರೆಗೆ ದಾಖಲೆಗಳಲ್ಲಿ ದುರಸ್ತಿ ಮಾಡುವದು.

(d) ಯಾವದೇ ಜಿಮ್ಮೆ ಆಸ್ತಿಗಳಲ್ಲಿ ಪ್ರವೇಶಿಸುವದು ಮತ್ತು ತಪಾಸ ಮಾಡುವದು. ಜಿಮ್ಮೆದಾರನ ಪ್ರಕರಣಗಳನ್ನು ತರಿಸಿ ತಪಾಸ ಮಾಡುವದು ಮತ್ತು ೩೭ ನೇ ಕಲಮಿನ ಮೇರೆಗೆ ಜಿಮ್ಮೆದಾರರಿಂದ ಅಥವಾ ಸಾರ್ವಜನಿಕ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಯಾವದೇ ವ್ಯಕ್ತಿಯಿಂದ ವರದಿ, ಲೆಖ್ಖಪತ್ರ, ಹೇಳಿಕೆ ಮತ್ತು ಹಕೀಕತ್ತು ನಾಮೆಯನ್ನು ತರಿಸಿಕೊಳ್ಳುವದು.

(e) ಯಾವದೇ ಹೇಳಿಕೆ, ನೋಟೀಸು, ಲೆಖ್ಖ ಮತ್ತು ಲೆಖ್ಖ ತಪಾಸಣೆಯ ಪಟ್ಟಿ ಅಥವಾ ಬೇರೆ ಯಾವದೇ ಕಾಗದ ಪತ್ರವನ್ನು ತಪಾಸಣಿ ಮಾಡಲಿಕ್ಕೆ ಪರವಾನಗಿ ಕೊಡುವದು.

(f) ೬೨ ನೇ ಕಲ್ಮಿನ ಮೇರೆಗೆ ಸಲಹೆಗಾರರ ಯಾದಿಯನ್ನು ತಯಾರಿಸುವದು. ಮತ್ತು ೬೩ ಮತ್ತು ೬೪ ನೇ ಕಲಮಿನ ಮೇರೆಗೆ ವಿಚಾರಣೆ ಬಗ್ಗೆ ಅವರಿಗೆ ಶಮನ್ಸು ಮಾಡುವದು ಮತ್ತು ಕರಿಸಿಗೊಳ್ಳುವದು.

(g) ನಿರ್ದಿಷ್ಟ ಪಡಿಸಿದ ಮೇರೆಗೆ ಕರ್ತವ್ಯಗಳನ್ನು ಮಾಡುವದು ಮತ್ತು ಅಧಿಕಾರ ನಡಿಸುವದು.

(೬೯) ಈ ಕಾಯದೆ ಪಟ್ಟಿಗೆ ಕೆಳಗೆ ಕಾಣಿಸಿದ ಮೇರೆಗೆ ಚಾರಿಟಿ ಕಮಿಶನರರು ತಮ್ಮ ಕರ್ತವ್ಯವನ್ನು ಮಾಡುವರು ಮತ್ತು ಅಧಿಕಾರವನ್ನು ನಡಿಸುವರು.

(a) ೩ ನೇ ಕಲ್ಮಿನಲ್ಲಿ ಹೇಳಿದಂತೆ ಆಡಳಿತೆಯ ಸಾಮಾನ್ಯ ಮೇಲ್ವಿಚಾರಣೆ ಮಾಡುವರು ಮತ್ತು ಈ ಕಾಯದೆಯ ಉದ್ದೇಶಗಳನ್ನು ನೆರವೇರಿಸುವರು.

(b) ೨೦, ೨೨, ೨೫ ನೇ ಕಲಮುಗಳ ಮೇರೆಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ನಿರ್ಣಯದ ಮೇಲೆ ಮಾಡಿದ ಅಪಿಲುಗಳನ್ನು ಸ್ವೀಕರಿಸಿ ನಿಕಾಲೆ ಮಾಡುವರು.

(c) ೨೫ ನೇ ಕಲ್ಮಿನ ಮೇರೆಗೆ ಯಾವದಾದರು ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ಯಾವ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ವಿಚಾರಣೆ ನಡಿಸಬೇಕೆಂಬುದನ್ನು ನಿರ್ಣಯ ಮಾಡುವ ಅಧಿಕಾರ.

(d) ೨೩ ನೇ ಕಲ್ಮಿನ ಮೇರೆಗೆ ಯಾವದೇ ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ವಿಶೇಷ ಲೆಖ್ಖ ತಪಾಸಣಿ ಮಾಡಬೇಕೆಂದು ಆಜ್ಞೆ ಹೊರಡಿಸುವ ಅಧಿಕಾರ

(e) ೩೪ ನೇ ಕಲ್ಮಿನ ಮೇರೆಗೆ ಲೆಖ್ಖ ತಪಾಸಣೆಗಾರರ ಕಡೆಯಿಂದ ಅಥಾವೆ ಪತ್ರಿಕೆಯ ನಕಲನ್ನು ಮತ್ತು ಉತ್ಪನ್ನ ಮತ್ತು ಖರ್ಚಿನ ಲೆಖ್ಖ ಪತ್ರಗಳನ್ನು ತರಿಸಿಕೊಳ್ಳುವದು.

(f) ೩೫ ನೇ ಕಲ್ಮಿನ ಮೇರೆಗೆ ಪಬ್ಲಿಕ್ ಸೆಕ್ಯುರಿಟಿಗಳಲ್ಲದೆ ಬೇರೆ ರೀತಿಯಿಂದ ಸಾರ್ವಜನಿಕ ಜಿಮ್ಮೆ ಹಣವನ್ನು ತೊಡಗಿಸಲಿಕ್ಕೆ ಜಿಮ್ಮೆದಾರರಿಗೆ ಪರವಾನಗಿ ಕೊಡುವದು.

(g) ೩೬ ನೇ ಕಲ್ಮಿನ ಮೇರೆ ಸಾರ್ವಜನಿಕ ಜಿಮ್ಮೆಕ್ಕೆ ಸಂಬಂದಪಟ್ಟ ಸ್ಥಾವರ ಆಸ್ತಿಯನ್ನು ಮಾರಾಟ, ವತ್ತಿ, ಅದಲು ಬದಲು, ಬಕ್ಷೀಸ ಅಥವಾ ಭಾಡೆ ಕೊಡುವ ಬಗ್ಗೆ ಮಂಜೂರ ಮಾಡುವದು.

(h) ಯಾವದೇ ಜಿಮ್ಮೆ ಆಸ್ತಿಯಲ್ಲಿ ಪ್ರವೇಶ ಮಾಡಿ ತಪಾಸ ಮಾಡುವದು, ಜಿಮ್ಮೆದಾರನ ಯಾವದೇ ಪ್ರಕರಣವನ್ನು ತರಿಸಿ ಪರಿಶೀಲಿ ಸುವದು, ಜಿಮ್ಮೆದಾರನ ಕಡೆಯಿಂದ ಅಥವಾ ೩೭ ನೇ ಕಲ್ಮಿನ ಮೇರೆಗೆ ಸಂಬಂಧಪಟ್ಟ ಯಾವದೇ ವ್ಯಕ್ತಿಯಿಂದ ವರದಿ, ಲೆಖ್ಖ, ಹೇಳಿಕೆ ಮತ್ತು ಹಕಿಕತ್ ನಾಮೆಯನ್ನು ತರಿಸಿಕೊಳ್ಳುವದು.

(i) ೪೦ ನೇ ಕಲ್ಮಿನ ಮೇರೆಗೆ ಸಾರ್ವಜನಿಕ ವಿಶ್ವಸ್ತ ಆಸ್ತಿಗೆ ಏನಾದರೂ ಹಾನಿ ತಟ್ಟಿದ್ದರೆ ಅದರ ಬಗ್ಗೆ ವಿಚಾರಣೆ ನಡಿಸುವದು ಮತ್ತು ೪೧ ನೇ ಕಲ್ಮಿನ ಮೇರೆಗೆ ಹೆಚ್ಚಿನ ದರವನ್ನು ಹಾಕಲು ಮಂಜೂರ ಮಾಡುವದು.

(j) ೪೩ ನೇ ಕಲ್ಮಿನ ಮೇರೆಗೆ ಧರ್ಮಾರ್ಥ ಉಂಬಳಿ ಆಸ್ತಿಗಳ ಖಜಾನಿದಾರರಾಗಿ ಕೆಲಸ ನಡಿಸುವದು.

(k) ಸಾರ್ವಜನಿಕ ಜಿಮ್ಮೆ ಆಸ್ತಿಗಳ ಜಿಮ್ಮೆದಾರರಾಗಿ ಕೆಲಸ ನಡಿಸುವದು.

(l) ೫೦ ನೇ ಕಲಮಿನ ಮೇರೆಗೆ ದಾವೆ ಮಾಡುವದು.

(m) ೫೧ ನೇ ಕಲಮಿನ ಮೇರೆಗೆ ದಾವೆ ಮಾಡಲಿಕ್ಕೆ ಒಪ್ಪಿಗೆಯನ್ನು ಕೊಡುವದು ಅಥವಾ ಅಲ್ಲಗಳೆಯುವದು.

(o] ಜಿಮ್ಮೆದಾರರಿಗೆ ಜಿಮ್ಮೆ ಹಣವನ್ನು ಅದೇ ವರ್ಗದ ಬೇರೆ ಜಿಮ್ಮೆಗೆ ಉಪಯೋಗ ಮಾಡಲಿಕ್ಕೆ ತಿಳಿಸುವ ಅಧಿಕಾರ. ಮತ್ತು ೫೫ ನೇ ಕಲ್ಮದ ಮೇರೆಗೆ ಕೋರ್ಟಿಗೆ ಅರ್ಜಿಮಾಡುವ ಅಧಿಕಾರ.

(p) ನಿರ್ದಿಷ್ಟ ಪಡಿಸಿದ ಮೇರೆಗೆ ಬೇರೆ ಕರ್ತವ್ಯಗಳನ್ನು ಮಾಡುವದು ಮತ್ತು ಬೇರೆ ಅಧಿಕಾರವನ್ನು ನಡಿಸುವದು.

(೭೦) ಕೆಳಗೆ ಕಾಣಿಸಿದ ಸಂದರ್ಭಗಳಲ್ಲಿ ಡೆಪ್ಯುಟಿ ಮತ್ತು ಅಸಿಸ್ಟಂಟ ಚಾರಿಟಿ ಕಮಿಶನರರ ನಿರ್ಣಯದ ವಿರುದ್ಧವಾಗಿ ಚಾರಿಟಿ ಕಮಿಶನರರ ಕಡಿಗೆ ಅಪಿಲು ಮಾಡಬಹುದು.

(a) ೨೦ ನೇ ಕಲ್ಮಿನ ಪ್ರಕಾರ ಕೊಟ್ಟ ನಿರ್ಣಯದ ಮೇಲೆ

(b) ೨೨ ನೇ ಕಲ್ಮಿನ ಮೇರೆಗೆ ಕೊಟ್ಟ ನಿರ್ಣಯದ ಮೇಲೆ

(c) ೨೮ ನೇ ಕಲ್ಮಿನ ಮೇರೆಗೆ ಹುಕುಂ ಕೊಟ್ಟ ನಿರ್ಣಯದ ಮೇಲೆ

(d) ೫೪ ನೇ ಕಲ್ಮ ೩ ನೇ ಪೋಟ ಕಲ್ಮಿನ ಕೆಳಗೆ ಮಾಡಿದ ಹುಕುಮಿನ ಮೇಲೆ

(೨) ನಿರ್ಣಯ ಕೊಟ್ಟ ಅಥವಾ ಆಜ್ಞೆಯನ್ನು ಮಾಡಿದ ೬೦ ದಿವ್ಸ ಗಳ ನಂತರ ಅಪೀಲು ನಡೆಯುವದಿಲ್ಲ.

(೩) ಅಪೆಲಂಟನನ್ನಾಗಲಿ ಅಥವಾ ಅವನ ವತಿಯಿಂದ ಹಾಜರ ಆದವನ ಹೇಳಿಕೆಯನ್ನು ಕೇಳಿಕೊಂಡು ಚಾರಿಟಿ ಕಮಿಶನರರು ಲೇಖಿಯಲ್ಲಿ ಕಾರಣಗಳನ್ನು ಬರೆದು ಕೆಳಗಿನ ಅಧಿಕಾರಿಗಳ ಹುಕುಮನ್ನು ಅಥವಾ ನಿರ್ಣಯವನ್ನು ರದ್ದು, ಬದಲು, ದುರಸ್ತಿ ಅಥವಾ ಕಾಯಂ ಮಾಡಬಹುದು. ಅಥವಾ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ, ಕಮೀಶನರರು ಅವಶ್ಯ ಕಂಡ ಮೇರೆಗೆ ಹೆಚ್ಚಿನ ಸಾಕ್ಷಿಯನ್ನಾಗಲಿ ಅಥವಾ ಹೆಚ್ಚಿನ ವಿಚಾರಣೆಯನ್ನಾಗಲಿ ಮಾಡಲಿಕ್ಕೆ ಆಜ್ಞೆ ವಿಧಿಸಬಹುದು. ಅಥವಾ ಹೆಚ್ಚಿನ ಪುರಾವೆ ತಾವೇ ತೆಗೆದುಕೊಳ್ಳಬಹುದು.

೭೧) ಚಾರಿಟಿ ಕಮಿಶನರರು ದಾವೆ ಮಾಡಲಿಕ್ಕೆ ಒಪ್ಪಿಗೆಯನ್ನು ಕೊಡದೆ ಇದ್ದದ್ದರ ಆಜ್ಞೆಯ ಮೇಲೆ ಹಾಗೆ ಆಜ್ಞೆ ಮಾಡಿದ ತಾರೀಖಿನಿಂದ ೬೦ ದಿವ್ಸಗಳಲ್ಲಿ ನಿರ್ದಿಷ್ಟಪಡಿಸಿದ ನಮೂನೆಯಂತೆ ಮತ್ತು ನಿರ್ದಿಷ್ಟಪಡಿಸಿದ ಫೀ ಹಣವನ್ನು ಕೊಟ್ಟು ೫೧ನೇ ಕಲಮಿನ ಮೇರೆಗೆ ಮುಂಬಯಿ ರೆವಿನ್ಯೂ ಟ್ರಾಯಬುನಲ್ಲಕ್ಕೆ ಅಪೀಲು ಮಾಡಬಹುದು.

(೨) ಮುಂಬಯಿ ರೆವಿನ್ಯೂ ಟ್ರಾಯಬುನ್ನಲ್ಲದವರು ತಮಗೆ ಯೋಗ್ಯ ಕಂಡಂತೆ ವಿಚಾರಣೆ ಮಾಡಿ ಚಾರಿಟಿ ಕಮಿಶನರರ ನಿರ್ಣಯವನ್ನು ರದ್ದು, ದುರಸ್ತಿ ಅಥವಾ ಕಾಯಂ ಮಾಡಬಹುದು.

೩) ಮುಂಬಯಿ ರೆವಿನ್ಯೂ ಟ್ರಾಯಬುನಲ್ಲದವರು ಮಾಡಿದ ನಿರ್ಣಯವು ಕೊನೆಯದಾಗಿಯೂ ಮತ್ತು ನಿರ್ಣಯಾತ್ಮಕವಾಗಿ ಇರುವದು.

೭೨) ೪೦, ೪೧, ಅಥವಾ ೭೦ನೇ ಕಲಮುಗಳ ಮೇರೆಗೆ ಆದ ನಿರ್ಣಯದಿಂದ ಅಥವಾ ಸಾರ್ವಜನಿಕ ಜಿಮ್ಮೆ ಇರುತ್ತದೆಯೋ ಹೇಗೆ ಅಥವಾ ಯಾವದೇ ಆಸ್ತಿಯು ಸಾರ್ವಜನಿಕ ಜಿಮ್ಮೆ ಆಸ್ತಿಯು ಇರುತ್ತದೆಯೋ ಹೇಗೆ ಎಂಬ ಪ್ರಶ್ನೆಯಿಂದ ಬಾಧಿಸಲ್ಪಟ್ಟ ವ್ಯಕ್ತಿಯು ಅಂಥ ನಿರ್ಣಯವನ್ನು ರದ್ದು ಪಡಿಸಲಿಕ್ಕೆ ಅಂಥ ನಿರ್ಣಯವಾದ ೬೦ ದಿವ್ಸಗಳಲ್ಲಿ ಕೋರ್ಟಿಗೆ ಅರ್ಜಿ ಮಾಡಬಹುದು.

(೨) ತಮಗೆ ಅವಶ್ಯ ಕಂಡುಬಂದಂತೆ ಪುರಾವೆಯನ್ನು ತೆಗೆದುಕೊಂಡ ನಂತರ ಕೋರ್ಟಿನವರು ಅಂಥ ನಿರ್ಣಯವನ್ನು ಕಾಯಂ, ರದ್ದು ಅಥವಾ ದುರಸ್ತ ಮಾಡಬಹುದು ಅಥವಾ ಹೆಚ್ಚಿನ ದರದ ಹಣ (ಸರಚಾರ್ಜ) ವನ್ನು ತಿರುಗಿ ಕೊಡಿಸಬಹುದು. ಮತ್ತು ಪರಿಸ್ಥಿತಿಗನುಸರಿಸಿ- ಯೋಗ್ಯ ತಂಡಂತೆ ಖರ್ಚಿನ ಬಗ್ಗೆ ಹುಕುಮು ಮಾಡಬಹುದು.

(೩) ೨ನೇ ಪೋಟ ಕಲ್ಮಿನ ಮೇರೆಗೆ ಅರ್ಜಿಯು ಇನ್ನೂ ಚಾಲತಿ ಇದ್ದಾಗ್ಗೆ ಬಂದೀ ಹುಕುಮು ಮಾಡುವ ಬಗ್ಗೆ ಬಾಧಿತ ವ್ಯಕ್ತಿಯು ಅರ್ಜಿ ಮಾಡಿದಲ್ಲಿ ಸರಚಾರ್ಜಿನ ಸಲುವಾಗಿದ್ದ ಎಲ್ಲ ಪ್ರಕರಣಗಳು ತಹಕೂಬ ಇಡಲ್ಪಡುವವು.

(೪) ೨ನೇ ಪೋಟ ಕಲ್ಮದ ಮೇರೆಗೆ ಕೋರ್ಟಿನವರು ಕೊಟ್ಟ ನಿರ್ಣಯದ ಮೇಲೆ ಹಾಯಕೋರ್ಟಿಗೆ ಅಪೀಲು ಮಾಡಬಹುದು. ಅಂಥ ಕೆಳ ಕೋರ್ಟಿನ ಹುಕುಂ, ಡಿಕ್ರಿ ಅಂತಾ ತಿಳಿಯತಕ್ಕದ್ದು.

೭೩) ಈ ಕಾಯದೆ ಮೇರೆಗೆ ವಿಚಾರಣೆ ಮಾಡುವಾಗ್ಗೆ ವಿಚಾರಣೆಯನ್ನು ನಡಿಸುವ ಅಧಿಕಾರಿಗಳಿಗೆ ಸಿವಿಲ್ ಪ್ರೊಸೀಜರ ಕೋಡಿನ ಪ್ರಕಾರ ಕೆಳಗೆ ಕಾಣಿಸಿದ ವಿಷಯಗಳ ಬಗ್ಗೆ ಕೋರ್ಟಿಗೆ ಇದ್ದ ಎಲ್ಲ ಅಧಿಕಾರಗಳು ಇರುತ್ತವೆ.

(a) ಪ್ರತಿಜ್ಞಾ ಲೇಖಗಳಿಂದ ಸಂಗತಿಗಳನ್ನು ಸಿದ್ಧಮಾಡುವದು.

(b) ಯಾವದೇ ವ್ಯಕ್ತಿಯನ್ನು ಶಮನ್ಸು ಮಾಡಿ ಕರಿಸಿಕೊಳ್ಳುವದು ಮತ್ತು ಅವನನ್ನು ಪ್ರತಿಜ್ಞೆಯ ಮೇಲೆ ಹೇಳಿಕೆಯನ್ನು ತೆಗೆದುಕೊಳ್ಳುವದು.

(c) ದಸ್ತೈವಜಗಳನ್ನು ಹಾಜರಪಡಿಸಲಿಕ್ಕೆ ವತ್ತಾಯ ಮಾಡುವದು.

(d) ಕಮಿಾಶನರರನ್ನು ನೇಮಿಸುವದು.

೭೪) ಇಂಡಿಯನ್ ಪೆನಲ್‌ಕೋಡ ಕಲಮು ೧೯೩, ೨೧೯, ಮತ್ತು ೨೨೮ ಕಲಮುಗಳ ಮೇರೆಗೆ ಈ ಕಾಯದೆ ಪ್ರಕಾರ ನಡೆಯತಕ್ಕ ಎಲ್ಲ ವಿಚಾರಣೆ ಮತ್ತು ಅಪೀಲುಗಳು ಕೋರ್ಟಿನಲ್ಲಿ ನಡೆದ ವ್ಯಾಜ್ಯಗಳೆಂದು ತಿಳಿಯತಕ್ಕದ್ದು.

೭೫) ಈ ಪ್ರಕರಣದ ಮೇರೆಗೆ ಅಪೀಲಿನ ಅವಧಿಯ ದಿವಸಗಳನ್ನು ಎಣಿಸುವಾಗ್ಗೆ ಇಂಡಿಯನ್ ಲಿಮಿಟೇಶನ್ ಕಾಯಿದೆಯ ೪, ೫, ೧೨, ೧೪ನೇ ಕಲಮುಗಳು ಅನ್ವಯಿಸುವವು.

೭೬) ಈ ಕಾಯಿದೆ ಮೇರೆಗೆ ನಡೆಯತಕ್ಕ ಎಲ್ಲ ವ್ಯಾಜ್ಯಗಳಿಗೆ ಸಿವಿಲ್ ಪ್ರೊಸೀಜರ ಕೋಡಿನ ಕಾಯಿದೆಯು ಅನ್ವಯಿಸುವದು.

೭೭) ೧೮, ೪೧, ೪೮ನೇ ಕಲಮುಗಳ ಮೇರೆಗೆ ವಸೂಲಾಗತಕ್ಕ ಹಣವು ವಸೂಲಾಗದಿದ್ದರೆ ಭೂಕಂದಾಯ ವಸೂಲ ಮಾಡುವ ಪದ್ಧತಿಯಂತೆ ವಸೂಲ ಮಾಡಲ್ಪಡುವದು.

## ೧೨ನೇ ಪ್ರಕರಣ

೭೮) ಚಾರಿಟಿ ಕಮೀಶನರರು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಇನ್ಸಪೆಕ್ಟರರು ಅಥವಾ ಕಾಯಿದೆ ಮೇರೆಗೆ ನೇಮಿಸಲ್ಪಟ್ಟ ಬೇರೆ ಕೆಳಗಿನ ಅಧಿಕಾರಿಗಳು ಅಥವಾ ಸಲಹೆಗಾರರು ಇಂಡಿಯನ್ ಪೆನಲ್ ಕೋಡ ಕಲಮು ೨೧ರ ಪ್ರಕಾರ (ಪಬ್ಲಿಕ್ ಸರ್ವಂಟ್ಸ) ಸಾರ್ವಜನಿಕ ಸೇವಕರು ಆಗುವರು.

೭೯) ಯಾವದಾದರೂ ಜಿಮ್ಮೆಯು ಸಾರ್ವಜನಿಕ ಜಿಮ್ಮೆ ಆಸ್ತಿ ಅಥವಾ ಯಾವದಾದರೂ ಆಸ್ತಿಯು ಅಂಥ ಜಿಮ್ಮೆದ ಆಸ್ತಿಯು ಇರುತ್ತದೆಯೋ ಹೇಗೆ ಎಂಬ ಪ್ರಶ್ನೆಯನ್ನು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ನಿರ್ಣಯಮಾಡುವರು ಮತ್ತು ಈ ಕಾಯಿದೆ ಮೇರೆಗೆ ಅಪೀಲು ಮಾಡಿದಲ್ಲಿ ಆ ಬಗ್ಗೆ ಚಾರಿಟಿ ಕಮೀಶನರರು ನಿರ್ಣಯ ಮಾಡುವರು.

(೨) ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಈ ಬಗ್ಗೆ ಕೊಟ್ಟ ನಿರ್ಣಯವು ಅಥವಾ ಮುಂದೆ ಅಪೀಲು ಮಾಡಿದ್ದರೆ ಚಾರಿಟಿ ಕಮೀಶನರರು ಅಪೀಲಿನಲ್ಲಿ ಮಾಡಿದ ನಿರ್ಣಯವು, ಕೋರ್ಟಿನ ನಿರ್ಣಯದಿಂದ

ಅಥವಾ ಅದರ ಮೇಲೆ ಅಪೀಲು ಮಾಡಿದ್ದಾದರೆ ಹಾಯಕೋರ್ಟಿನ ನಿರ್ಣಯದಿಂದ ರದ್ದು ಮಾಡಲ್ಪಡುವ ವರೆಗೆ ಕೊನೆಯದಾಗಿಯೂ ಮತ್ತು ನಿರ್ಣಯಾತ್ಮಕವಾಗಿಯೂ ಉಳಿಯುವದು.

೭೯ A) ಯಾವದೇ ಸಾರ್ವಜನಿಕ ವಿಶ್ವಸ್ಥ ಆಸ್ತಿಯ ಬಗ್ಗೆ ವ್ಯಾಜ್ಯವು ನಡೆದಾಗ್ಗೆ ಚಾಂಟಿ ಕಮಿಶನರರಾಗಲಿ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾಂಟಿ ಕಮಿಶನರರಾಗಲಿ ಪಕ್ಷಗಾರರಿದ್ದರೆ ಆ ವ್ಯಾಜ್ಯಕ್ಕೆ ತಗಲಿದ ಖರ್ಚಿನ ಹಣವು ಅಂಥ ಸಾರ್ವಜನಿಕ ಜಿಮ್ಮೆ ಆಸ್ತಿಯಿಂದ ಅಥವಾ ಅವರ ಫಂಡಿನಿಂದ ವಸೂಲ ಮಾಡಲ್ಪಡುವದಾಗುತ್ತದೆ.

(೭೯) (B) ಈ ಕಾಯದೆ ಮೇರೆಗೆ ದಾವೇಕ್ಕೆ ಅಥವಾ ಅಪೀಲಿಗೆ ಕೋರ್ಟಿಗೆ ಅಥವಾ ಹಾಯಕೊರ್ಟಿಗೆ ಮಾಡಿದ ಅರ್ಜಿ ಅಥವಾ ಅಪೀಲುಗಳಿಗೆ ತಗಲಬಹುದಾದ ಖರ್ಚು ಕೋರ್ಟಿನ ಮರ್ಜಿಪ್ರಕಾರ ಇದ್ದು ಸಂಬಂಧಪಟ್ಟ ಸಾರ್ವಜನಿಕ ಜಿಮ್ಮೆ ಆಸ್ತಿಯಿಂದ ವಸೂಲ ತೆಗೆದುಕೊಳ್ಳಬೇಕೆಂದು ಆಜ್ಞೆ ಮಾಡಬಹುದು.

(೭೯) (C) ಚಾಂಟಿ ಕಮಿಶನರರು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾಂಟಿ ಕಮಿಶನರರ ಮುಂದೆ ನಡೆದಂಥ ವಾಜ್ಯದಲ್ಲಿ ತಗಲಬಹುದಾದ ಖರ್ಚಿನ ಬಗ್ಗೆ ಸಂಬಂಧಪಟ್ಟ ಸಾರ್ವಜನಿಕ ವಿಶ್ವಸ್ಥ ಆಸ್ತಿಯಿಂದಾಗಲಿ ಅಥವಾ ವ್ಯಕ್ತಿಯಿಂದಾಗಲಿ ವಸೂಲ ಮಾಡಿಕೊಳ್ಳಬೇಕೆಂದು ಹುಕುಂ ಮಾಡಬಹುದು.

(೭೯) (D) ಬ ಪರಿಸಿಷ್ಟದ ೧. ೨ ನೇ ಸಾಲುಗಳಲ್ಲಿ ವರ್ಣಿಸಿದ ದಸ್ತೈವಜುಗಳ ಬಗ್ಗೆ ೩ ನೇ ಸಾಲಿನಲ್ಲಿ ತೋರಿಸಿಹಂತೆ ಸ್ಟಾಂಪ ಡ್ಯುಟಿ ಕೊಡಬೇಕಾಗುವದು.

(೮೦) ಈ ಕಾಯದೆಯಲ್ಲಿ ಸ್ಪಷ್ಟವಾಗಿ ತೋರಿಸಲ್ಪಟ್ಟಿದ್ದರ ಹೊರ್ತಾಗಿ ಈ ಕಾಯದೆ ಮೇರೆಗೆ ಯಾವದೇ ಅಧಿಕಾರಿಯು ಯಾವದೇ ಪ್ರಶ್ನೆಯನ್ನು ಈ ಕಾಯದೇ ಪ್ರಕಾರ ನಿರ್ಣಯಿಸಲ್ಪಡತಕ್ಕದಿದ್ದಂಥಾದ್ದನ್ನು

ಅಥವಾ ಯಾವದೇ ಅಧಿಕಾರಿಯ ನಿರ್ಣಯವು ಕೊನೆಯದಾಗಿದ್ದು ದನ್ನು ಯಾವ ದಿವಾಣಿ ಕೋರ್ಟು ವಿಚಾರ ಮಾಡಲಿಕ್ಕೆ ಅಧಿಕಾರವುಳ್ಳದ್ದು ಇರುವದಿಲ್ಲ.

(೮೧) (೧) ಯಾವದೇ ಕೆಲಸವನ್ನು ಈ ಕಾಯದೆಯ ಮೇರೆಗೆ ಸದುದ್ದೇಶದಿಂದ ಮಾಡಿದ್ದರ ಬಗ್ಗೆ ರಾಜ್ಯ ಸರಕಾರದ ವಿರುದ್ಧ ಅಥವಾ ಯಾವದೇ ಅಧಿಕಾರಿಯ ವಿರುದ್ಧ ದಾವೆ ಫಿರ್ಯಾಧಿ ಅಥವಾ ಇನ್ನಿತರ ವ್ಯಾಜ್ಯವನ್ನಾಗಲಿ ಮಾಡಲಿಕ್ಕೆ ಬರುವದಿಲ್ಲ.

(೨) ೧ ನೇ ಪೋಟಿ ಕಲಮಿಗೆ ಅಧೀನವಾಗಿ ರಾಜ್ಯ ಸರಕಾರದ ಪೂರ್ವ ಮಂಜೂರಿಯನ್ನು ಪಡೆಯುದ ವಿನಾ ಯಾವದೇ ಸಾರ್ವಜನಿಕ ಆಸ್ತಿಯ ಬಗ್ಗೆ ಜಿಮ್ಮೆದಾರರೆಂದು ಚಾರಿಟಿ ಕಮೀಶನರರನ್ನು ನೇಮಿಸಿದಾಗ್ಗೆ ಅವರ ವಿರುದ್ಧ ೫೦ ನೇ ಕಲಮಿನ ಮೇರೆಗೆ ದಾವೆ ಮಾಡಲಿಕ್ಕೆ ಬರಲಾರದು.

(೮೨) ಈ ಕಾಯುದೆ ಮೇರೆಗೆ ಯಾವದೇ ಗುನ್ಹೆ ವಿಚಾರಣೆಯನ್ನು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರಾಗಲಿ ಅಥವಾ ೧ ನೇ ವರ್ಗ ಮ್ಯಾಜಿಸ್ಟ್ರೇಟರಾಗಲಿ ಮಾಡಬಹುದು ಆದರೆ ಇವರಿಗಿಂತ ಕೆಳದರ್ಜೆಯ ಮ್ಯಾಜಿಸ್ಟ್ರೇಟರಿಗೆ ಅಂಥ ಗುನ್ಹೆಗಳನ್ನು ಚೌಕಸಿ ಮಾಡುವ ಅಧಿಕಾರವಿರುವದಿಲ್ಲ.

(೮೩) ಚಾರಿಟಿ ಕಮೀಶನರರ ಪೂರ್ವ ಮಂಜೂರಿಯಿಲ್ಲದಲೆ ಈ ಕಾಯದೆ ಮೇರೆಗೆ ದಂಡಿಸಲ್ಪಡುವ ಗುನ್ಹೇದ ಬಗ್ಗೆ ಫಿರ್ಯಾದಿ ಮಾಡಲಿಕ್ಕೆ ಬರಲಾರದು.

(೮೪) (೧) ಈ ಕಾಯದೆಯ ತತ್ವಗಳನ್ನು ಅಮಲಿನಲ್ಲಿ ತರುವ ದಕ್ಕಾಗಿ ರಾಜ್ಯ ಸರಕಾರದವರು ನಿಯಮಗಳನ್ನು ಮಾಡಬಹುದು

(೨) ಅಂಥ ನಿಯಮಗಳು ಕೆಳಗೆ ಕಾಣಿಸಿದ ವಿಷಯಗಳ ಬಗ್ಗೆ ಇರುತ್ತವೆ.

(a) ೧ ನೇ ಕಲ್ಮದಲ್ಲಿ ೪ ನೇ ಪೋಟ ಕಲ್ಮಿನ ಮೇರೆಗೆ ಪ್ರಕಟ ನೆಯನ್ನು ಹೊರಡಿಸುವ ಪದ್ಧತಿ ಬಗ್ಗೆ

(b) ಈ ಕಾಯದೇ ಮೇರೆಗೆ ನೇಮಿಸಲ್ಪಟ್ಟ ಚಾರಿಟಿ ಕಮಿಶ ನರನ್ನು ಮತ್ತು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರನ್ನು ಹೊರ್ತುಪಡಿಸಿ ಉಳಿದ ಅಧಿಕಾರಿಗಳ ಅಧಿಕಾರ ಮತ್ತು ಕರ್ತವ್ಯದ ಬಗ್ಗೆ

(c) ಈ ಕಾಯದೆಯಲ್ಲಿ ಕೊಟ್ಟಿದ್ದಕ್ಕಿಂತ ಹೆಚ್ಚಾಗಿ ಸಲಹೆಗಾರರ ಕರ್ತವ್ಯ ಮತ್ತು ಅಧಿಕಾರದ ಬಗ್ಗೆ

(d) ೧೪ ನೇ ಕಲ್ಮಿನ ೧ ನೇ ಪೊಟ ಕಲ್ಮವಲ್ಲಿ ವರ್ಣಿಸಿದ ಪ್ರದೇಶ ಮತ್ತು ಉಪದೇಶಗಳ ಗಡಿಗಳ ಬಗ್ಗೆ

(c) ಸಾರ್ವಜನಿಕ ಜಿಮ್ಮೆ ನೋಂದಣಿ ಆಫೀಸಿನಲ್ಲಿ ಇಡತಕ್ಕ ಪುಸ್ತಕ ಸೂಟಿ ಪತ್ರಿಕೆ ಹಾಗು ನೊಂದಣಿ ಪುಸ್ತಕಗಳನ್ನು ಇಡುವ ಬಗ್ಗೆ ಮತ್ತು ೧೭ ನೇ ಕಲ್ಮಿನ ಮೇರೆಗೆ ಅಂಥ ನೋಂದಣಿ ಬುಕ್ಸು ಸೂಟಿ ಪತ್ರಿಕೆ ಮತ್ತು ಪುಸ್ತಕಗಳಲ್ಲಿ ದಾಖಲೆ ಮಾಡುವ ಬಗ್ಗೆ

(f) ಸಾರ್ವಜನಿಕ ಜಿಮ್ಮೆ ಆಸ್ತಿಗಳನ್ನು ನೋಂದಣಿ ಮಾಡಿಸುವ ಬಗ್ಗೆ ಮಾಡತಕ್ಕ ಅರ್ಜಿಯ ನಮೂನೆ ಮತ್ತು ಅದಕ್ಕೆ ಕೊಡತಕ್ಕ ಫೀ, ಸದ್ರಿ ಅರ್ಜಿಯಲ್ಲಿ ತುಂಬತಕ್ಕ ಬೇರೆ ವಿಷಯಗಳು, ಹೇಗೆ ಸಹಿ ಮತ್ತು ಇಕರಾರು ಮಾಡಬೇಕು, ಜಿಮ್ಮೆ ಆಸ್ತಿಯ ಸ್ವರೂಪ ಮತ್ತು ಅದರ ಕಿಮ್ಮತ್ತು ೧೮ ನೇ ಕಲಮಿನ ಮೇರೆಗೆ ವಿಶಿಷ್ಟ ವಿಷಯಗಳನ್ನು ತೋರಿ ಸುವದು ಅವಶ್ಯವಿಲ್ಲದಾಗ್ಗೆ ನಿಯಮಗಳನ್ನು ಮಾಡುವದು

(g) ೧೯ ಮತ್ತು ೩೯ ನೇ ಕಲಮುಗಳ ಮೇರೆಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಹೇಗೆ ವಿಚಾರಣೆ ಮಾಡಬೇಕೆಂಬು ವಬಗ್ಗೆ

(h) ೨೨ ನೇ ಕಲಮಿನ ಮೇರೆಗೆ ಬದಲಾವಣೆ ಯಾದ ಬಗ್ಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಹೇಗೆ ವರದಿ ಮಾಡಬೇಕೆಂಬುವ ನಮೂನೆ ಬಗ್ಗೆ

(i) ೨೩ ನೇ ಕಲಮಿನ ಮೇರೆಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ದಾಖಲೆ ಮಾಡುವ ಪುಸ್ತಕ

(J) ೨೭ ನೇ ಕಲ್ಮ ೧ ನೇ ಪೋಟ ಕಲ್ಮಿನ ಮೇರೆಗೆ ಹಕ್ಕಿನ ಪತ್ರಿಕೆಗಳ ಮೇಲೆ ಹೇಗೆ ಮುದ್ರೆ ಅಥವಾ ಸಹಿ ಮಾಡಬೇಕೆಂಬುವ ಪದ್ಧತಿ

(k) ೩೨ ನೇ ಕಲ್ಮಿನ ೨ ನೇ ಪೋಟ ಕಲಮಿನ ಮೇರೆಗೆ ಲೆಖ್ಖಗಳನ್ನು ಬರೆಯುವ ಬಗ್ಗೆ ವಿಶಿಷ್ಟ ವಿಷಯಗಳು ಮತ್ತು ೩೩ ನೇ ಕಲಮಿನ ಮೇರೆಗೆ ವಿಶೇಷ ಲೆಖ್ಖ ತಪಾಸಣೆ ಮಾಡಿಸುವ ಬಗ್ಗೆ (ಫೀ) ರುಸುಮು

(l) ೪೬ ನೇ ಕಲ್ಮಿನ ಮೇರೆಗೆ ವೃತ್ತ್ಯಪತ್ರದ ಮಜಕೂರನು ಪ್ರಕಟ ಮಾಡುವ ರೀತಿ

(m) ೪೮ ನೇ ಕಲ್ಮಿನ ೧ ನೇ ಪೋಟ ಕಲ್ಮಿನ ಮೇರೆಗೆ ಆಡಳಿತೆಯು ವೆಚ್ಚವನ್ನು ಹಾಕುವದು

(n) ೫೪ ನೇ ಕಲ್ಮಿನ ೩ ನೇ ಪೋಟ ಕಲ್ಮಿನ ಮೇರೆಗೆ ಆಜ್ಞೆಯನ್ನು ಮಾಡುವ ರೀತಿ ೬ ನೇ ಪೋಟ ಕಲ್ಮಿನ ಮೇರೆಗೆ ಲೆಖ್ಖ ಪತ್ರಗಗಳನ್ನು ಹಾಜರ ಮಾಡುವ ನಮೂನೆ

(o) ೫೫ ನೇ ಕಲ್ಮಿನ ೧ ನೇ ಪೋಟ ಕಲ್ಮಿನ ಮೇರೆಗೆ ಕೋರ್ಟಿನ ಆಜ್ಞೆಯನ್ನು ಪಡೆಯುವ ಬಗ್ಗೆ ಜಿಮ್ಮೆದಾರರು ಅರ್ಜಿಯನ್ನು ಮಾಡುವದಾದರೆ ಎಷ್ಟು ಅವಧಿಯಲ್ಲಿ ಮಾಡಿಕೊಳ್ಳಬೇಕು

[p] ೫೮ ನೇ ಕಲ್ಮಿನ ಮೇರೆಗೆ ಪ್ರತಿ ವರ್ಷ ಯಾವ ತಾರಿಖಿಗೆ ಮತ್ತು ಯಾವ ಪದ್ಧತಿ ಪ್ರಕಾರ ವಂತಿಗೆ ಹಣವನ್ನು ಪ್ರತಿಯೊಂದು ಸಾರ್ವಜನಿಕ ಜಿಮ್ಮೆ ಆಸ್ತಿಯಿಂದ ವಸೂಲ ಮಾಡಿಕೊಳ್ಳುವದು ಮತ್ತು ೬೦ ನೇ ಕಲ್ಮಿನ ಮೇರೆಗೆ ನಿಧಿಯ ಹಣದಿಂದ ಎಷ್ಟು ಕೊಡಬೇಕು ಮತ್ತು ಹಂಚಬೇಕು ಮತ್ತು ಯಾವ ರೀತಿಯಿಂದ ಅಂಥ ಹಣವನ್ನು ತೊಡಗಿಸಬೇಕು ಅಥವಾ ಎಲ್ಲಿ ಇಡಬೇಕು

[q] ೬೨ ನೇ ಕಲ್ಮಿನ ೧ ನೇ ಪೋಟ ಕಲ್ಮಿನ ಪ್ರಕಾರ ಯಾವ ತಾರೀಖಿಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಸಲಹೆ ಗಾರರ ಯಾದಿಯನ್ನು ತಯಾರ ಮಾಡುವದು ಮತ್ತು ೨ ನೇ ಪೋಟಿ ಕಲಮಿನ ಪ್ರಕಾರ ಯಾವ ಜನರು ಸಲಹೆಗಾರರಿಂದು ಕೆಲಸ ಮಾಡು ವದರಿಂದ ಮುಕ್ತರಾಗಿರಬೇಕೆಂಬದು

[r] ೬೫ ನೇ ಕಲ್ಮಿನ ೫ ನೇ ಪೋಟ ಕಲ್ಮಿನ ಪ್ರಕಾರ ಸಲಹೆಗಾ ರರಿಗೆ ಭತ್ತೆ ಕೊಡುವದು

(s) ೬೮ ನೇ ಕಲ್ಮಿನ ಮೇರೆಗೆ ಡೆಪ್ಯುಟಿ ಮತ್ತು ಅಸಿಸ್ಟಂಟ ಚಾರಿಟಿ ಕಮಿಶನರರು ಬೇರೆ ಯಾವ ಕರ್ತವ್ಯ ಮಾಡಬೇಕು ಮತ್ತು ಯಾವ ಅಧಿಕಾರವನ್ನು ನಡಿಸಬೇಕು.

(t) ೬೯ ನೇ ಕಲ್ಮಿನ ಮೇರೆಗೆ ಚಾರಿಟಿ ಕಮಿಶನರರು ಯಾವ ಕರ್ತವ್ಯ ಮಾಡಬೇಕು ಮತ್ತು ಯಾವ ಅಧಿಕಾರವನ್ನು ನಡಿಸಬೇಕು.

(u) ೭೧ ನೇ ಕಲ್ಮಿನ ಮೇರೆಗೆ ಅಂಥ ಅಪೀಲನ್ನು ದಾಖಲ ಮಾಡು ವಾಗ್ಗೆ ರುಸುಮು ಹಣ ಎಷ್ಟು ಕೊಡಬೇಕು ಮತ್ತು ಯಾವ ನಮೂನೆ ಯಂತೆ ಮಾಡಬೇಕು.

(v) ಸಾರ್ವಜನಿಕ ಜಿಮ್ಮೆ ಆಸ್ತಿಗಳ ಆಡಳಿತೆ ನಿಧಿಗೆ ಜಮಾ ಮಾಡ ತಕ್ಕ ಹಣವನ್ನು ಎಲ್ಲಿ ಇಡಬೇಕು. ಮತ್ತು ಹೇಗೆ ತೊಡಗಿಸಬೇಕು ಮತ್ತು ಅದರಿಂದ ಹೇಗೆ ಖರ್ಚು ಮಾಡಬೇಕು.

(w) ಈ ಕಾಯದೆ ಮೇರೆಗೆ ಮತ್ತೆ ಯಾವದೇ ವಿಷಯವನ್ನು ನಿರ್ದಿಷ್ಟಪಡಿಸಿದರೆ ಅಂಥಾದ್ದನ್ನು ಮಾಡುವದು.

(೮೫) ೧೮೬೩ ನೇ ಇಸ್ವಿಯ ರಿಲಿಜಸ್ ಎಂಡೊಮೆಂಟ ಆ್ಯಕ್ಟ ರದ್ದು ಗೊಳಿಸಲ್ಪಟ್ಟಿದೆ.

(೨) ೧ ನೇ ಕಲ್ಮಿನ ೪ ನೇ ಪೋಟ ಕಲ್ಮಿನ ಪ್ರಕಾರ ಯಾವದೇ ಸಾರ್ವಜನಿಕ ಜಿಮ್ಮೆಕ್ಕೆ ಅಥವಾ ಸಾರ್ವಜನಿಕ ಜಿಮ್ಮೆಗಳ ವರ್ಗಕ್ಕೆ ಈ

ಕಾಯಿದೆಯ ಕಲಮುಗಳು ಅನ್ವಯಿಸಲ್ಪಟ್ಟ ಮೇಲೆ ಪರಿಸಿಷ್ಟ 'ಅ' ದಲ್ಲಿ ಕಾಣಿಸಿದ ಕಾಯಿದೆಯ ಕಲಮುಗಳು ಅಂಥ ಜಿಮ್ಮೆಕ್ಕೆ ಅಥವಾ ಜಿಮ್ಮೆಗಳ ವರ್ಗಕ್ಕೆ ಅನ್ವಯಿಸುವದಿಲ್ಲ.

(೩) ಈ ಪ್ರಕಾರವಾಗಿ ರದ್ದುಗೊಳಿಸಲ್ಪಟ್ಟ ಕಾಯಿದೆಯಿಂದ ಕೆಳಗೆ ಕಾಣಿಸಿದ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬರುವದಿಲ್ಲ.

(a) ಈ ಕಾಯಿದೆಯು ಅನ್ವಯಿಸುವ ಪೂರ್ವದಲ್ಲಿ ಉದ್ಭೂತವಾದ ಹಕ್ಕು, ಹಿತ, ಹೊಣೆಗಾರಿಕೆ, ಋಣ.

(b) ಇಂಥ ಹಕ್ಕು ಹಿತ, ಹೊಣೆಗಾರಿಕೆ ಋಣದ ಬಗ್ಗೆ ನಡೆದ ಯಾವದೇ ವ್ಯಾಜ್ಯ ಅಥವಾ ಪರಿಹಾರ ಕ್ರಮ ಅಥವಾ

(c) ಈ ಕಾಯದೆ ಅಮಲಿನಲ್ಲಿ ಬರುವ ಪೂರ್ವದಲ್ಲಿ ಮಾಡಿದ ಅಥವಾ ಮಾಡಿಸಿದ ಯಾವದೇ ಕಾರ್ಯ.

## ಪ ರಿ ಶಿ ಷ್ಟ 'ಅ'

( ೨೮, ೬೧, ೬೪, ೮೫ ನೇ ಕಲಮುಗಳನ್ನು ನೋಡಿರಿ )

(೧) ೧೯೨೦ ನೇ ಸಾಲಿನ ಚಾರಿಟೇಬಲ್ ಮತ್ತು ರಿಲಿಜಸ್ ಟ್ರಸ್ಟ ಕಾಯದೆ

(೨) ೧೯೨೩ ನೇ ಸಾಲಿನ ಮುಸಲ್ಮಾನ ವಾಕ್ಫ ಕಾಯಿದೆ

(೩) ೧೯೩೮ ನೇ ಸಾಲಿನ ಮುಂಬಯಿ ಪಬ್ಲಿಕ್ ಟ್ರಸ್ಟ ರಜಿಸ್ಟ್ರೇಶನ್ ಕಾಯಿದೆ

(೪) ೧೯೩೬ ನೇ ಸಾಲಿನ ಪಾರ್ಸಿ ಪಬ್ಲಿಕ್ ಟ್ರಸ್ಟ ರಜಿಸ್ಟ್ರೇಶನ್ ಕಾಯದೆ

(೫) ಬರೋಡಾ ಪಬ್ಲಿಕ್ ಇನ್ಸ್ಟಿಟ್ಯೂಶನ್ ಕಾಯದೆ

(೬) ೧೯೪೦ ರಲ್ಲಿ ಜಮಖಂಡಿ ಸಂಸ್ಥಾನಕ್ಕೆ ಅನ್ವಯಿಸಲ್ಪಟ್ಟ ೧೮೬೩ ನೇ ಸಾಲಿನ ರಿಲಿಜಸ್ ಎಂಡೋಮೆಂಟ ಕಾಯದೆ.

(೭) ಜಮಖಂಡಿ ಸಂಸ್ಥಾನದ ೧೯೧೨ ನೇ ಸಾಲಿನ ದೇವಸ್ಥಾನ ನಿಯಮಗಳು.

# ಪರಿಶಿಷ್ಟ 'ಬ'

| ಕಲಮು | ದಸ್ತೈವಜಿನ ವರ್ಣನೆ | ಫೀ |
|---|---|---|
| ೧ | ೨ | ೩ |
| ೧೮ (೧) | ಸಾರ್ವಜನಿಕ ಜಿಮ್ಮೆದ ನೋಂದಣಿಗಾಗಿ ಮಾಡುವ ಅರ್ಜಿ. | ರೂ. ೨-೦-೦ |
| ೨೨ (೧) | ೧೭ ನೇ ಕಲ್ಮಿನ ಮೇರೆಗೆ ಇಟ್ಟ ನೋಂದಣಿ ಬುಕ್ಕಿನಲ್ಲಿದ್ದ ದಾಖಲೆಗಳಲ್ಲಿ ಬದಲಾವಣೆ ಮಾಡುವ ಬಗ್ಗೆ ವರದಿ. | ರೂ. ೧-೦-೦ |
| ೨೫ (೧) | ೧೯ ಅಥವಾ ೨೨ ನೇ ಕಲ್ಮುಗಳ ಮೇರೆಗೆ ಯಾವದಾದರು ಜಿಮ್ಮೆ ಆಸ್ತಿಯು ಬಗ್ಗೆ ಯಾವ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ವಿಚಾರಣೆಯನ್ನು ನಡಿಸಬೇಕೆಂದು ನಿರ್ಣಯಿಸುವದಕ್ಕಾಗಿ ಚಾರಿಟಿ ಕಮೀಶನರರ ಕಡೆಗೆ ಯಾವದೇ ಹಿತವಿದ್ದ ವ್ಯಕ್ತಿಯು ಅರ್ಜಿ. | ರೂ. ೨-೦-೦ |
| ೨೯ | ಮೃತ್ಯುಪತ್ರದಿಂದ ಸಾರ್ವಜನಿಕ ಜಿಮ್ಮೆ ಆಸ್ತಿ ಮಾಡಿದ್ದರೆ ಮೃತ್ಯುಪತ್ರ ನಡಿಸುವವರು ಮಾಡಿಕೊಳ್ಳುವ ಅರ್ಜಿ. | ರೂ. ೨-೦-೦ |
| ೩೬ | ಸಾರ್ವಜನಿಕ ಜಿಮ್ಮೆ ಆಸ್ತಿಯನ್ನು ಪರಾಧೀನ ಮಾಡುವ ಬಗ್ಗೆ ಚಾರಿಟಿ ಕಮೀಶನರರ ಮಂಜೂರಿ ಪಡೆಯುವ ಅರ್ಜಿ. | ರೂ. ೧೦-೦-೦ |
| ೪೪ | ಸಾರ್ವಜನಿಕ ಜಿಮ್ಮೆದ ಜಿಮ್ಮೆದಾರನಾಗಲಿಕ್ಕೆ ಚಾರಿಟಿ ಕಮೀಶನರರ ಒಪ್ಪಿಗೆ ಪಡೆಯಲು ಮಾಡುವ ಅರ್ಜಿ. | ರೂ. ೧೦-೦-೦ |

| ಕಲಮು | ದಸ್ತೈವಜಿನ ವರ್ಣನೆ | ಫೀ |
|---|---|---|
| ೧ | ೨ | ೩ |
| ೪೫ | ಸಾರ್ವಜನಿಕ ಜಿಮ್ಮೆ ಮಾಡುವ ಯಾವದೇ ವ್ಯಕ್ತಿಯು ಅಂಥ ಜಿಮ್ಮೆಕ್ಕೆ ಜಿಮ್ಮೆದಾರರಾಗಲು ಚಾರಿಟಿ ಕಮೀಶನರರ ಒಪ್ಪಿಗೆಯನ್ನು ಕೇಳಿಕೊಳ್ಳುವ ಅರ್ಜಿ. | ರೂ. ೧೦-೦-೦ |
| ೪೬ | ಮೃತ್ಯುಪತ್ರದ ಪ್ರಕಾರ ಚಾರಿಟಿ ಕಮಿಶನರರನ್ನು ಜಿಮ್ಮೆದಾರರೆಂದು ನೇಮಿಸಲ್ಪಟ್ಟ ಮೇಲೆ ಮೃತ್ಯುಪತ್ರ ನಡೆಸುವವರು ಅಥವಾ ಮೃತ್ಯುಪತ್ರ ಮಾಡಿಟ್ಟವರ ಆಸ್ತಿಯ ಅಡಳಿತೆ ಪತ್ರವನ್ನು ಪಡಕೊಂಡವರಾಗಲಿ ಚಾರಿಟಿ ಕಮೀಶನರಿಗೆ ತಿಳಿಸುವದು. | ರೂ. ೧೦-೦-೦ |
| ೪೭ (೧) | ಹೊಸ ಜಿಮ್ಮೆದಾರನನ್ನು ನೇಮಿಸುವ ಬಗ್ಗೆ ಚಾರಿಟಿ ಕಮೀಶನರರಾಗಲಿ ಅಥವಾ ಸಾರ್ವಜನಿಕ ಜಿಮ್ಮೆಯಲ್ಲಿ ಹಿತವಿದ್ದ ಯಾವದೇ ವ್ಯಕ್ತಿಯಾಗಲಿ ಕೋರ್ಟಿಗೆ ಮಾಡುವ ಅರ್ಜಿ. | ರೂ. ೧೦-೦-೦ |
| ೪೭ (೨) | ೪೭ ನೇ ಕಲ್ಮಿನ ೧ ನೇ ಪೋಟ ಕಲ್ಮ ಪ್ರಕಾರ ಕೋರ್ಟಿಗೆ ಅರ್ಜಿ ಮಾಡಿಕೊಂಡದ್ದರ ಮೇಲೆ ನಿರ್ಣಯ ಕೊಟ್ಟಿದ್ದರ ವಿರುದ್ಧ ಹಾಯಕೋರ್ಟಿಗೆ ಅಪೀಲು. | ರೂ. ೧೦-೦-೦ |
| ೫೧ (೧) | ೫೦ ನೇ ಕಲ್ಮಿನಲ್ಲಿ ಸೂಚಿಸಿದ ಪ್ರಕಾರವಾಗಿದ್ದ ದಾವೆಯನ್ನು ತರಲಿಕ್ಕೆ ಚಾರಿಟಿ ಕಮೀಶನರರ ಒಪ್ಪಿಗೆಯನ್ನು ಪಡೆಯಲು ಮಾಡಿಕೊಳ್ಳುವ ಅರ್ಜಿ. | ರೂ. ೦೦-೦-೦ |

| ಕಲಮು | ದಸ್ತೈವಜಿನ ವರ್ಣನೆ | ಬೆಲೆ |
| --- | --- | --- |
| ೧ | ೨ | ೩ |
| ೬೯ (೩) | ಯಾವದೇ ಬ್ಯಾಂಕಿನಲ್ಲಿ ಅಥವಾ ವ್ಯಕ್ತಿಯು ಕಡೆಗೆ ಇದ್ದ ಸಾರ್ವಜನಿಕ ಜಿಮ್ಮೆ ಆಸ್ತಿಯಿಂದ ವಂತಿಗೆ ಅಥವಾ ವರ್ಗಣಿ ಹಣವನ್ನು ಕೊಡುವ ಬಗ್ಗೆ ಚಾರಿಟಿ ಕಮೀಶನರರು ಮಾಡಿದ ಹುಕುಮಿನ ವಿರುದ್ಧ ರಾಜ್ಯ ಸರಕಾರಕ್ಕೆ ಆಪೀಲು ಮಾಡುವದು. | ರೂ. ೧೦-೦-೦ |
| ೭೦ (೧) | ೩೦, ೩೩, ೩೮ ನೇ ಕಲ್ಮುಗಳ ಮೇರೆಗೆ ಅಥವಾ ೬೪ ನೇ ಕಲಮು ೩ ನೇ ಪೋಟಕಲ್ಮಿನ ಮೇರೆಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಕೊಟ್ಟ ನಿರ್ಣಯ ಅಥವಾ ಆಜ್ಞೆಯ ವಿರುದ್ಧವಾಗಿ ಚಾರಿಟಿ ಕಮೀಶನರರ ಕಡೆಗೆ ಆಪೀಲು. | ರೂ. ೧೦-೦-೦ |
| ೭೧ (೧) | ಚಾರಿಟಿ ಕಮೀಶನರರು ದಾವೆ ಮಾಡಲಿಕ್ಕೆ ಸಮ್ಮತಿ ಕೊಡದೆ ಇದ್ದದ್ದರ ವಿರುದ್ಧವಾಗಿ ಮುಂಬಯಿ ರೆವಿನ್ಯೂ ಟ್ರಾಯಬ್ಯುನಲ್ಲಿಗೆ ಆಪೀಲು. | ರೂ. ೧೦-೦-೦ |
| ೭೨ (೧) | ೪೦, ೪೧, ಅಥವಾ ೭೦ ನೇ ಕಲಮುಗಳ ಮೇರೆಗೆ ಚಾರಿಟಿ ಕಮೀಶನರರು ಕೊಟ್ಟ ನಿರ್ಣಯದ ವಿರುದ್ಧ ಅಥವಾ ಜಿಮ್ಮೆ ಆಸ್ತಿಯು ಅದೆಯೋ ಹೇಗೆ ಮತ್ತು ಜಿಮ್ಮೆ ಆಸ್ತಿಯಾಗಿದ್ದರೆ ಸಾರ್ವಜನಿಕ ಜಿಮ್ಮೆ ಆಸ್ತಿಯಿರುತ್ತದೆಯೋ ಹೇಗೆ ಅಥವಾ ಯಾವ ದೇಆಸ್ತಿ ಅಂಥ ಜಿಮ್ಮೆ ಆಸ್ತಿಯ ಭಾಗವಿರುತ್ತದೆಯೋ ಹೇಗೆ ಎಂಬ ಬಗ್ಗೆ ಕೋರ್ಟಿಗೆ ಅರ್ಜಿ. | ರೂ. ೧೦-೦-೦ |

| ಕಲಮು | ದಸ್ತೈವಜಿನ ವರ್ಣನೆ | ಬೆಲೆ |
|---|---|---|
| ೧ | ೨ | ೩ |
| ೭೨ (೪) | ೭೨ ನೇ ಕಲ್ಮಿನ ೨ನೇ ಪೋಟ ಕಲಮಿನ ಮೇರೆಗೆ ಕೋರ್ಟಿನವರು ಕೊಟ್ಟ ನಿರ್ಣಯದ ವಿರುದ್ಧವಾಗಿ ಹಾಯಕೋರ್ಟಿಗೆ ಅಪೀಲು. | ರೂ. ೧೦-೦-೦ |
| | ಚಾರಿಟಿ ಕಮಿಶನರ ಅಥವಾ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ಮುಂದೆ ಯಾವದೇ ವಿಚಾರಣೆ ಅಪೀಲು ನಡಿಸುವದಕ್ಕಾಗಿ ಮುಕ್ತ್ಯಾರನಾಮಾ ಅಥವಾ ವಕಾಲತ್ ನಾಮಾ. | ರೂ. ೧-೦-೦ |
| | ಚಾರಿಟಿ ಕಮಿಶನರರಿಗೆ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ಬೇರೆ ಯಾವದೇ ಅರ್ಜಿ ಕೊಡುವದು. | ರೂ. ೧-೦-೦ |



# ಸಾರ್ವಜನಿಕ ಜಿಮ್ಮೆ ಕಾಯದೆ ಕೆಳಗೆ

## ಮುಂಬಯಿ ರಾಜ್ಯ ಸರಕಾರದವರು ಮಂಜೂರ ಮಾಡಲ್ಪಟ್ಟ ನಿಯಮಗಳ ಸಂಕ್ಷಿಪ್ತ ವಿವರಣೆ

### ಭಾಗ (೩)

ಈ ನಿಯಮಗಳು ಮುಂಬಯಿ ಸರಕಾರಿಗ್ಯಾಜೆಟ್ PartIV B ಭಾಗದಲ್ಲಿ ತಾ।।೫-೪-೧೯೫೧ ನೇ ದಿವಸ ೧೨೦೫ ನೇ ಪಾನಿನಮೇಲೆ ಪ್ರಕಟಿಸಲ್ಪಟ್ಟಿವೆ.

ಶೀಜ.ನ. ನಿಯಮ ನ.

(೧) (೧) ಈ ನಿಯಮಗಳು ೧೯೫೧ ನೇ ಸಾಲಿನ ಮುಂಬಯಿ ಸಾರ್ವಜನಿಕ ಜಿಮ್ಮೆಗಳ ನಿಯಮಗಳೆಂದು ಕರೆಯಲ್ಪಟ್ಟಿವೆ.

(೨) (೩) ವ್ಯಾಖ್ಯೆ— ಈ ನಿಯಮಗಳಲ್ಲಿ "ಬ್ಯಾಂಕ" ಎಂದು ಎಲ್ಲಿ ಯಾದರೂ ಶಬ್ದವು ಬಂದಿದ್ದರೆ ಅದು 'ಇಂಡಿಯಾ ರಿಝರ್ವ ಬ್ಯಾಂಕ' ಎಂದು ತಿಳಿಯತಕ್ಕದು.

(೩) (೪) ಪ್ರದೇಶಗಳು ಮತ್ತು ಅವುಗಳ ಗಡಿ:— ಈ ಕಾಯದೆಯ ಸಲುವಾಗಿ ಕೆಳಗೆ ಕಾಣಿಸಿದ ಮೇರೆಗೆ ಪ್ರದೇಶಗಳು ಮತ್ತು ಅವುಗಳ ಹದ್ದು ಇರತಕ್ಕದ್ದು.

(೧) ಬೃಹನ್ಮುಂಬಯಿ ಪ್ರದೇಶ:— ಬೃಹನ್ಮುಂಬಯಿ ಕಾಯದೆಗಳ 'ಅ' ಪರಿಶಿಷ್ಟದಲ್ಲಿ ಮತ್ತು ೧೯೪೫ ನೇ ಮುಂಬಯಿ ಹಾಯಕೋರ್ಟ[ಹದ್ದು ಪ್ರಕಟನೆ] ಕಾಯದೇಯಲ್ಲಿ ನಿರ್ದಿಷ್ಟಪಡಿಸಿದಂತೆ ಮತ್ತು ಠಾಣಾ ಮತ್ತು ಕುಲಾಬಾ ಜಿಲ್ಹೆಗಳು ಸಮಾವೇಶವಾದದ್ದು

(೨) ಅಹಮದಾಬಾದ ಪ್ರದೇಶ:— ಅಹಮದಾಬಾದ ಅಮ್ರೇಲಿ, ಮೇಹೆಸಾನಾ, ಬನಾಸಕಂಠಾ, ಮತ್ತು ಸಬರಕಂಠಾ ಜಿಲ್ಹೆಗಳು ಸಮಾವೇಶವಾದದ್ದು.

ಶೀ. ಸ. ನಿ. ಸ.

(೩) ಬರೋಡಾ ಪ್ರದೇಶ:— ಬರೋಡಾ, ಶಾಮರಾ ಪಂಚಮಹಲ ಗಳು, ಬ್ರೋಚ, ಸುರತ, ಮತ್ತು ಡಾಂಗ ಜಿಲ್ಲೆಗಳು ಸಮಾವೇಶವಾದದ್ದು

(೪) ಪುನಾ ಪ್ರದೇಶ:— ಪುಣಾ, ಪೂರ್ವ ಖಾನದೇಶ, ಪಶ್ಚಿಮ ಖಾನದೇಶ, ನಾಶಿಕ, ಅಹಮ್ಮದನಗರ ಮತ್ತು ಸೊಲ್ಲಾಪುರ ಜಿಲ್ಲೆಗಳು ಸಮಾವೇಶವಾದದ್ದು

(೫) ಕೊಲ್ಹಾಪುರ ಪ್ರದೇಶ:— ಕೊಲ್ಹಾಪುರ ಉತ್ತರ ಸತಾರಾ, ದಕ್ಷಿಣ ಸತಾರಾ, ಮತ್ತು ರತ್ನಾಗಿರಿ ಜಿಲ್ಲೆಗಳು ಸಮಾವೇಶವಾದದ್ದು

(೬) ಬೆಳಗಾವ ಪ್ರದೇಶ:— ಬೆಳಗಾವ, ಧಾರವಾಡ, ಕ್ಯಾನಡಾ, ಮತ್ತು ವಿಜಾಪುರ ಜಿಲ್ಲೆಗಳು ಸಮಾವೇಶವಾದದ್ದು.

(೪) (೬) ೧೮ ನೇ ಕಲ್ಮಿನ ಮೇರಿಗೆ ಸಾರ್ವಜನಿಕ ಜಿಮ್ಮೆಯನ್ನು ನೋಂದಣಿ ಮಾಡುವ ಬಗ್ಗೆ ಅರ್ಜಿ—

(೧) ೧೮ ನೇ ಕಲಮಿನ ೫ ನೇ ಪೋಟ ಕಲಮಿನಲ್ಲಿ ಹೇಳಿದ [೧] ರಿಂದ (೨) ವಾಕ್ಯಾಂಗ [ಕ್ಲಾಜು] ಗಳಲ್ಲಿ ನಿರ್ದಿಷ್ಟಪಡಿಸಿದ ವಿಷಯಗಳೊ ಡನೆ ಸಾರ್ವಜನಿಕ ಜಿಮ್ಮೆಯನ್ನು ನೋಂದಣಿ ಮಾಡುವ ಬಗ್ಗೆ ಅರ್ಜಿ ಯಲ್ಲಿ ಕೆಳಗೆ ಕಾಣಿಸಿದ ವಿಷಯಗಳನ್ನು ಸೇರಿಸಬೇಕು.

(a) ಜಿಮ್ಮೆಯನ್ನು ಹುಟ್ಟಿಸುವ ದಸ್ತೈವಜಿನ ವಿವರಣೆಗಳು.

(b) ಜಿಮ್ಮೆಯ ಮೂಲ ಅಥವಾ ಉತ್ಪತ್ತಿಯ ಬಗ್ಗೆ ಇದ್ದ ದಸ್ತೈವ ಜಗಳನ್ನು ಬಿಟ್ಟು ಬೇರೆ ವಿವರಣೆಗಳು.

(c) ಜಿಮ್ಮೆಯ ಉದ್ದೇಶಗಳು.

(d) ಜಿಮ್ಮೆಯ ಉತ್ಪನ್ನದ ಕಾರಣಗಳು ಅಥವಾ ಮೂಲ ಸ್ಥಾನ ಗಳು.

(e) ಜಿಮ್ಮೆ ಆಸ್ತಿಯ ಮೇಲೆ ಏನಾದರು ಸಾಲದ ಹೊಣೆ ಇದ್ದರೆ ಅದರ ವಿವರಣೆ.

(f) ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಯೋಜನೆ ಇದ್ದರೆ ಅದರ ವಿವರಣೆ.

ಶೀ. ನ. ನಿ. ನ.

(g) ಜಿಮ್ಮೆ ಆಸ್ತಿಗಳಿಗೆ ಸಂಬಂಧಪಟ್ಟ ಹಕ್ಕಿನ ಕಾಗದಗಳ ವಿವರಣೆ ಮತ್ತು ಸದ್ರಿ ಕಾಗದಗಳನ್ನು ಇಟ್ಟುಕೊಂಡ ಜಿಮ್ಮೇದಾರರ ಹೆಸರುಗಳು.

[೨] ಕೊನೆಗಿದ್ದ ೨ ನೇ ಪರಿಶಿಷ್ಟದಲ್ಲಿಯ ನಮೂನೆ ಮೇರೆಗೆ ಅರ್ಜಿಯು ಇರತಕ್ಕದ್ದು

[೩] ಅರ್ಜಿಯ ಜೊತೆಗೆ ಜಿಮ್ಮೆ ದಸ್ತೈವಜಿನ ನಕಲು ಇಡುವದಲ್ಲದೆ ಸಾರ್ವಜನಿಕ ಜಿಮ್ಮೆಯ ವಿಷಯವಾಗಿ ಅಮಲಿನಲ್ಲಿದ್ದ ಯಾವದಾದರೂ ಯೋಜನೆ ಅನ್ವಯಿಸಲ್ಪಟ್ಟಿದ್ದರೆ ಅದರ ನಕಲನ್ನು ಸಹ ಹಾಜರ ಪಡಿಸಬೇಕು

[೪] ಅರ್ಜಿಯನ್ನು ಸಹಿಮಾಡುವ ಪ್ರತಿಯೊಬ್ಬ ಅರ್ಜಿದಾರನು ಮ್ಯಾಜಿಸ್ಟ್ರೇಟರು, ಪ್ರತಿಜ್ಞಾ ಮಾಡಿಸಲಿಕ್ಕೆ ಅಧಿಕಾರವುಳ್ಳ ಯಾವದೇ ಅಧಿಕಾರಿಯು, ಜಸ್ಟಿಸ್ ಆಫ್ ಪೀಸ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಇವರ ಮುಂದೆ ಪ್ರತಿಜ್ಞಾ ಮಾಡಿ ಅರ್ಜಿಯಲ್ಲಿ ಬರೆದ ಎಲ್ಲ ಸಂಗತಿಗಳು ತಮ್ಮ ತಿಳುವಳಿಕೆ ಮಟ್ಟಿಗೆ ಮತ್ತು ನಂಬಿಗೆಯ ಮೇರೆಗೆ ಸರಿಯಿರುತ್ತವೆಂದು ಬರೆಯಬೇಕು.

[೫] ಅರ್ಜಿಯ ಜೊತೆಗೆ ಕೆಳಗೆ ಕಾಣಿಸಿದ ಮೇರೆಗೆ ರುಸುಮಿನ ರೋಖ ಹಣವನ್ನು ಕಳಿಸಿಕೊಡಬೇಕು.

| | |
|---|---|
| [೧] ಸಾರ್ವಜನಿಕ ಜಿಮ್ಮೆ ಆಸ್ತಿಯ ಬೆಲೆ ೨೦೦೦ ರೂಪಾಯಿಗಳನ್ನು ಮೀರದಿದ್ದರೆ | R. ೩—೦—೦ |
| [೨] ಸಾರ್ವಜನಿಕ ಜಿಮ್ಮೆ ಆಸ್ತಿಯ ಬೆಲೆ ೨೦೦೦ ರೂಪಾಯಿಗಳಿಗಿಂತ ಹೆಚ್ಚು ಆದರೆ ೫೦೦೦ ರೂಪಾಯಿಗಳನ್ನು ಮೀರದಿದ್ದರೆ | R. ೫—೦—೦ |
| [೩] ಸಾರ್ವಜನಿಕ ಜಿಮ್ಮೆ ಆಸ್ತಿಯ ಬೆಲೆ ೫೦೦೦ ರೂಪಾಯಿಗಳಿಗಿಂತ ಹೆಚ್ಚು ಆದರೆ ೧೦,೦೦೦ ರೂಪಾಯಿಗಳನ್ನು ಮೀರದಿದ್ದರೆ | R. ೧೦—೦—೦ |
| [೪] ಸಾರ್ವಜನಿಕ ಜಿಮ್ಮೆ ಆಸ್ತಿಯ ಬೆಲೆ | R. ೨೦—೦—೦ |

ಶೀ. ನ. ನಿ. ನ.

೧೦,೦೦೦ ರೂಪಾಯಿಗಳಿಗಿಂತ ಕಡಿಮೆ ಆದರೆ
೨೫೦೦೦ ರೂಪಾಯಿ ಮೀರಿದ್ದರೆ
[೫] ಸಾರ್ವಜನಿಕ ಜಿಮ್ಮೆ ಆಸ್ತಿಯ ಬೆಲೆ R. ೨೫—೦—೦
೨೫೦೦೦ ರೂಪಾಯಿ ಮೀರಿದ್ದರೆ

೨೮ ನೇ ಕಲಮಿನ ಮೇರೆಗೆ ಸಾರ್ವಜನಿಕ ಜಿಮ್ಮೆ ಆಸ್ತಿಯು ನೋಂದಣಿ ಮಾಡಲ್ಪಟ್ಟಿದ್ದರೆ ಮೇಲ್ಕಾಣಿಸಿದಂತೆ ಫೀ [ರುಸುಮು] ಹಣ ವನ್ನು ವಸೂಲು ಮಾಡತಕ್ಕದ್ದಲ್ಲ.

೫) (೭) ವಿಚಾರಣೆಯ ಪದ್ಧತಿಯು, ಶಕ್ಯವಿದ್ದಮಟ್ಟಿಗೆ ಬೃಹದ್ ಮುಂಬಯಿ ಪ್ರದೇಶದಲ್ಲಿ ಪ್ರೆಸಿಡೆನ್ಸಿ ಸ್ಮಾಲ ಕಾಜ ಕೋರ್ಟ ಆ್ಯಕ್ಟ ಪ್ರಕಾರ ದಾವೆಗಳನ್ನು ವಿಚಾರ ಮಾಡಲಿಕ್ಕೆ ಹಾಕಿಕೊಟ್ಟ ಪದ್ಧತಿ ಮೇರೆಗೆ ಮತ್ತು ಬೇರೆ ಕಡೆಗೆ ಪ್ರಾಂತಿಕ ಸ್ಮಾಲ ಕಾಜ ಕೋರ್ಟ ಕಾಯದೆ ೧೮೮೭ ಇದರ ಪದ್ಧತಿ ಪ್ರಕಾರ ಚೌಕಸಿ ನಡೆಯುವದು. ಈ ಚೌಕಸಿಯ ಕಾಲಕ್ಕೆ ಪಕ್ಷ ಗಾರರು ತಾವು ಸ್ವತಃ ಅಥವಾ ತಮ್ಮ ಎಜಂಟರು ಅಥವಾ ವಕೀಲರ ಮುಖಾಂತರ ಹಾಜರ ಆಗಬಹುದು. ಆದರೆ ಡೆಪ್ಯುಟಿ ಅಥವಾ ಚಾರಿಟಿ ಕಮಿಶನರರು ಆದೇಶ ಮಾಡಿದ ಕಾಲಕ್ಕೆ ಪಕ್ಷಗಾರರು ಸ್ವತಃ ಹಾಜರ ಆಗ ಆಗತಕ್ಕದ್ದು.

(೬) (೧೩) (೧) ಸಾರ್ವಜನಿಕ ಜಿಮ್ಮೆಗಳ ನೋಂದಣಿ ಬುಕ್ಕಿನಲ್ಲಿ ಏನಾದರೂ ಬದಲಾವಣೆ ಅಥವಾ ಮುಂದೆ ಮಾಡಬಹುದಾದ ಬದಲಾವಣೆ ಗಳ ಬಗ್ಗೆ ೨೨ ನೇ ಕಲಮಿನ ೧ ನೇ ಪೋಟ ಕಲಮಿನ ಮೇರೆಗೆ ಇದರ ಲಗತ ಇದ್ದ ೩ ನೇ ಪರಿಶಿಷ್ಟದಲ್ಲಿಯ ನಮೂನೆಯ ಮೇರೆಗೆ ಯಾವದೇ ಜಿಮ್ಮೆ ಆಸ್ತಿಯ ಜಿಮ್ಮೆದಾರನು ಡೆಪ್ಯುಟಿ ಚಾರಿಟಿ ಕಮಿಶನರಿಗೆ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ವರದಿ ಮಾಡಬೇಕು.

(೨) ಈ ಪ್ರಕಾರವಾಗಿ ವರದಿಯು ಬಂದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ೪ ನೇ ಪರಿಶಿಷ್ಟದಲ್ಲಿಯ ನಮೂನೆಯ ಮೇರೆಗೆ ಈ ಬಗ್ಗೆ ಇಟ್ಟ ನೋಂದಣಿ ಬುಕ್ಕಿನಲ್ಲಿ ನಮೂದ ಮಾಡುವರು

ಶೀ. ನ. ೩೯ ನ.
ಜಿಮ್ಮೆದಾರರು ವರದಿ ಮಾಡದೇ ಇದ್ದ ಯಾವದೇ ಬದಲಾವಣೆಗಳು ಆಗಿದ್ದರೂ ಅವುಗಳನ್ನು ಸಹ ಅಂಥ ನೋಂದಣಿ ಬುಕ್ಕಿನಲ್ಲಿ ಡೆಪ್ಯುಟಿ ಅಥವಾ ಆಸಿಸ್ಟಂಟ ಚಾರಿಟಿ ಕಮೀಶನರರು ನಮೂದಮಾಡುವರು.

(೭) (೧೭) ಸಾರ್ವಜನಿಕ ಜಿಮ್ಮೆ ಆಸ್ತಿಯ ಜಿಮ್ಮೆದಾರರು ತಮಗೆ ಸಂಬಂಧಪಟ್ಟ ಸಾರ್ವಜನಿಕ ಜಿಮ್ಮೆ ಆಸ್ತಿಯ ಬಗ್ಗೆ ಪದ್ಧತಿ ಪ್ರಕಾರ ಲೆಖ್ಖ ಪತ್ರಗಳನ್ನು ಇಡಬೇಕು. ಚಾರಿಟಿ ಕಮೀಶನರರ ಅಭಿಪ್ರಾಯದ ಮೇರೆಗೆ ಕೆಳಗೆ ಕಾಣಿಸಿದ ವಿಷಯಗಳನ್ನು ಪರಿಶೀಲಿಸಲಿಕ್ಕೆ ಅನುಕೂಲವಾಗುವಂತೆ ಲೆಖ್ಖಪತ್ರಗಳಿರಬೇಕು.

(೫) ೧೦೦೦ ರೂಪಾಯಿ ಅಥವಾ ಅದಕಿಂತ ಹೆಚ್ಚು ವಾರ್ಷಿಕ ಒಟ್ಟು ಉತ್ಪನ್ನವಿದ್ದು ಸಾರ್ವಜನಿಕ ಜಿಮ್ಮೆ ಆಸ್ತಿ ಇದ್ದಾಗ್ಗೆ ಮತ್ತು ೯ ನೇ ಪರಿಶಿಷ್ಟದಲ್ಲಿ ಕಾಣಿಸಿದ ಮೇರೆಗೆ ಜಮಾ ಖರ್ಚಿನ ಲೆಖ್ಖ ಮತ್ತು ಆಥಾವೆ ಪತ್ರಿಕೆ ತಯಾರಿಸುವದು.

(ii) ೧೦೦೦ ರೂಪಾಯಿಗಳಿಗಿಂತ ಕಡಿಮೆ ವಾರ್ಷಿಕ ಒಟ್ಟು ಉತ್ಪನ್ನ ವಿದ್ದು ಸಾರ್ವಜನಿಕ ಜಿಮ್ಮೆ ಆಸ್ತಿ ಇದ್ದಲ್ಲಿ ೯ ಅ ಮತ್ತು ೯ಬ ಪರಿಶಿಷ್ಟಗಳಲ್ಲಿ ನಮೂನೆಯ ಮೇರೆಗೆ ಹೇಳಿಕೆಯನ್ನು ತಯಾರಿಸುವದು.

(iii) ದೇಣಿಗೆ ಯಿಂದ ಬಂದ ಉತ್ಪನ್ನದ ಬಗ್ಗೆ ೯ ಕ. ಪರಿಶಿಷ್ಟದಲ್ಲಿ ನಮೂನೆಯ ಪ್ರಕಾರ ಹೇಳಿಕೆಯನ್ನು ತಯಾರಿಸುವದು.

[೨] ೧೯ ನೇ ನಿಯಮದಲ್ಲಿ ಹಾಕಿಕೊಟ್ಟ ಪದ್ಧತಿಯ ಮೇರೆಗೆ ಜಿಮ್ಮೆ ದಾರನು ತನ್ನ ಲೆಖ್ಖಪತ್ರಗಳನ್ನು ಶೋಧಮಾಡಿಸಿಗೊಳ್ಳಬೇಕಾಗುವದು.

ಆದರೆ ೧೦೦೦ ರೂಪಾಯಿಗಳಿಗಿಂತ ಕಡಿಮೆ ವಾರ್ಷಿಕ ಉತ್ಪನ್ನವಿದ್ದು ಸಾರ್ವಜನಿಕ ವಿಶ್ವಸ್ಥ ಆಸ್ತಿಯ ವಿಷಯವಾಗಿ ಅದರ ಜಿಮ್ಮೆದಾರನು ೯ ಅ ಮತ್ತು ೯ ಬ ಪರಿಶಿಷ್ಟದಲ್ಲಿಯ ನಮೂನೆಯ ಪ್ರಕಾರ ಉತ್ಪನ್ನ ಮತ್ತು ಖರ್ಚಿನ ಬಾಬುಗಳ ಪೂರ್ಣ ಮತ್ತು ನಿಜವಾದ ಹೇಳಿಕೆಯನ್ನು ತಯಾರಿ ಸಿ ಆಯಾ ಪ್ರದೇಶದ ಡೆಪ್ಯುಟಿ ಅಥವಾ ಆಸಿಸ್ಟಂಟ ಚಾರಿಟಿ ಕಮೀಶನರರ

ಶೀ. ಸ. ನಿ. ಸ.

ಕಡೆಗೆ ವಪ್ಪಿಸಬಹುದು. ಮತ್ತು ಅಂಥ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ೧೯ ನೇ ನಿಯಮದಲ್ಲಿ ಹಾಕಿಕೊಟ್ಟ ಪದ್ಧತಿಯ ಮೇರೆಗೆ ಶಕ್ಯವಿದ್ದಮಟ್ಟಿಗೆ ಲೆಖ್ಖ ತಪಾಸ ಮಾಡಿಸುವದು ಮತ್ತು ಪ್ರತಿಯೊಂದು ಆಸ್ತಿಯ ವಿಷಯವಾಗಿ ನಿರ್ಣಯ ಮಾಡಿದ ಮೇರೆಗೆ ೨೫ ರೂಪಾಯಿಗಳಿಗಿಂತ ಹೆಚ್ಚಿಗೆ ಇಲ್ಲದಷ್ಟು ಲೆಖ್ಖ ತಪಾಸಣಿ ಫೀಯನ್ನು ಅಂಥ ಜಿಮ್ಮೆದಾರನ ಕಡೆಯಿಂದ ವಸೂಲ ಮಾಡಿ ಕೊಡುವರು.

(೮) [೧೮] ೩೩ ನೇ ಕಲಮಿನ ೨ ಅಥವಾ ೪ ನೇ ಪೋಟ ಕಲಮುಗಳ ಪ್ರಕಾರ ಮಾಡುವ ಲೆಖ್ಖ ತಪಾಸಣೆಗಾಗಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ತಾವು ಸ್ವತ: ಅಥವಾ ಲೆಖ್ಖ ತಪಾಸಣೆಗಾರರ ವಿನಂತಿ ಮೇರೆಗೆ.

[೧] ಲೆಖ್ಖ ತಪಾಸಣೆಗಾರರು ಮುಂದೆ ಯಾವದೇ ಪುಸ್ತಕ ದಸ್ತೈವಜು ಲೆಖ್ಖಪತ್ರ ಪಾವತಿ ಅಥವಾ ಇತರ ಕಾಗದ ಪತ್ರ ಅಥವಾ ಲೆಖ್ಖತಪಾಸಣೆಯನ್ನು ಯೋಗ್ಯರೀತಿಯಿಂದ ನಡೆಸುವ ಬಗ್ಗೆ ಅವಶ್ಯ ದಾಖಲೆ ಮುಂತಾದವುಗಳನ್ನು ಹಾಜರ ಮಾಡಿಸ ಬಹುದು.

[೨] ಮೇಲ್ಕಾಣಿಸಿದ ಪುಸ್ತಕ ದಸ್ತೈವಜ ಲೆಖ್ಖಪತ್ರ ಪಾವತಿ ಮತ್ತು ಇತರ ಕಾಗದ ಪತ್ರಗಳನ್ನು ಇಟ್ಟುಕೊಂಡ ಜಿಮ್ಮೆದಾರ ಅಥವಾ ಅವರ ವತಿಯಿಂದ ಸದ್ರಿ ಕಾಗದ ಪತ್ರವನ್ನು ತಾಬಾ ಇಟ್ಟುಕೊಂಡ ಯಾವದೇ ಮನುಷ್ಯನಾಗಲಿ ಲೆಖ್ಖ ತಪಾಸಣೆಗಾರರ ಮುಂದೆ ಹಾಜರ ಆಗುವಂತೆ ಮಾಡುವದು.

[೩] ಮೇಲ್ಕಾಣಿಸಿದ ಉದ್ದೇಶದ ಸಲುವಾಗಿ ಅವಶ್ಯವಿದ್ದ ಸಂಗತಿಗಳನ್ನು ಲೆಖ್ಖ ತಪಾಸಣೆಗಾರರಿಗೆ ತಿಳಿಸಲಿಕ್ಕೆ ಯಾವದೇ ಜಿಮ್ಮೆದಾರ ಅಥವಾ ಅವರ ವತಿಯಿಂದ ಬೇರೆಯವರಿಗೆ ವತ್ತಾಯ ಮಾಡುವರು.

[೪] ಜಿಮ್ಮೆ ಆಸ್ತಿಗೆ ಸಂಬಂಧ ಪಟ್ಟ ಜಂಗಮ ಆಸ್ತಿಯನ್ನು ತಾಬಾ ಇಟ್ಟುಕೊಂಡ ಅಥವಾ ಆ ಬಗ್ಗೆ ಸಂಗತಿಯನ್ನು ತಿಳಿಸುವ ಹೊಣೆಯುಳ

ಶೀ. ನ. ನಿ. ನ.

ಅಥವಾ ಅದರ ಮೇಲೆ ಅಧಿಕಾರವುಳ್ಳ ಯಾವದೇ ಜಿಮ್ಮೆದಾರ ಅಥವಾ ಯಾವದೇ ಮನುಷ್ಯನು ಅಂಥ ಜಂಗಮ ಆಸ್ತಿಯನ್ನು ಅಥವಾ ಅದರ ಬಗ್ಗೆ ಸಂಗತಿಯನ್ನು ಲೆಖ್ಖ ತಪಾಸಣೆಗಾರರಿಗೆ ತಿಳಿಸುವಂತೆ ಮಾಡುವರು

[೯] [೨೧] ೩೩ ನೇ ಕಲ್ಮಿನ ೧ನೇ ಪೋಟ ಕಲಮಿನ ಮೇರೆಗೆ ಲೆಖ್ಖ ಪತ್ರಗಳ ಅಥಾವೆ ತೆಗೆದ ೪ ತಿಂಗಳಗಳೊಳಗೆ ಜಿಮ್ಮೆದಾರರು ತಮ್ಮ ಲೆಖ್ಖಪತ್ರಗಳನ್ನು ತಪಾಸಮಾಡಿಸಿ ಗೊಳ್ಳ ಬೇಕಾಗುವದು. ಮತ್ತು ಆಡಿಟರರು ಲೆಖ್ಖ ತಪಾಸ ಮಾಡಿದ ೧೫ ದಿವಸಗಳೊಳಗಾಗಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಗೆ ಅಥಾವೆ ಲೆಖ್ಖಪತ್ರಿಕೆಯ ನಕಲನ್ನು ಮತ್ತು ಜಮಾ ಖರ್ಚಿನ ಲೆಖ್ಖವನ್ನು ತನ್ನ ವರದಿಯ ಜೊತೆಗೆ ಕಳಿಸಿಗೊಡಬೇಕಾಗುವದು.

ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಯೋಗ್ಯ ಕಾರಣಗಳ ಸಲುವಾಗಿ ಅವಧಿಯನ್ನು ಬೆಳಿಸಬಹುದು.

(೨) ೧೦ ನೇ ಪರಿಶಿಷ್ಟದಲ್ಲಿಯ ನಮೂನೆಯ ಮೇರೆಗೆ ೧ನೇ ಪೋಟ ನಿಯಮದ ಪ್ರಕಾರ ಬಂದಂಥ ಎಲ್ಲ ಲೆಖ್ಖ ತಪಾಸಣೆಯ ವರದಿಗಳ ನೋಂದಣಿ ಪುಸ್ತಕಗಳು ಪ್ರತಿಯೊಂದು ಸಾರ್ವಜನಿಕ ಜಿಮ್ಮೆ ನೋಂದಣಿ ಆಫೀಸಿನಲ್ಲಿ ಕಾಯ್ದಿಡಲ್ಪಡುವವು.

[೧೦] (೨೨) ಕೆಲವು ಶರತ್ತುಗಳಿಗೆ ಅಧೀನವಾಗಿ ಮತ್ತು ನಿರ್ದಿಷ್ಟಪಡಿಸುವ ಶೋಧನಾ ರುಸುಮನ್ನು ಕೊಟ್ಟರೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು, ಯಾವದೇ ಹಿತವಿದ್ದ ಮನುಷ್ಯನು ಅಥವಾ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರಿಂದ ಪರವಾನಿಗಿ ಪಡೆದ ಯಾವದೇ ಮನುಷ್ಯನು ಅರ್ಜಿಮಾಡಿದರೆ ಅಂಥ ಮನುಷ್ಯನಿಗೆ ಸಾರ್ವಜನಿಕ ಜಿಮ್ಮೆಗಳ ನೋಂದಣಿ ಪುಸ್ತಕದಲ್ಲಿಯ ದಾಖಲೆ ಅಥವಾ ಅದರ ಭಾಗವನ್ನು ಅಥವಾ ಯಾವದೇ ಹೇಳಿಕೆ, ನೋಟೀಸು, ಸಂಗತಿ, ಲೆಖ್ಖಪತ್ರ, ಲೆಖ್ಖ ತಪಾಸಣೆಯ ವರದಿ ಅಥವಾ ಈ ಕಾಯದೇ ಮೇರೆಗೆ ದಾಖಲ ಮಾಡಿದ ಯಾವದೇ ಕಾಗದಗಳನ್ನು ತಪಾಸ ಮಾಡಲಿಕ್ಕೆ ಪರವಾನಗಿ ಕೊಡುವರು.

ಶೀ. ಸ. ನಿ. ನ.

(೨) ಅಂಥ ಅರ್ಜಿಯಲ್ಲಿ ಯಾವ ಕಾಗದಗಳನ್ನು ತಪಾಸ ಮಾಡ ಬೇಕೋ ಅಂಥ ಕಾಗದಗಳನ್ನು ಗುರ್ತಿಸುವಂಥ ಅವಶ್ಯ ಸಂಗತಿಗಳನ್ನು ಬರೆಯಬೇಕು.

(೩) ಸಾರ್ವಜನಿಕ ಜಮ್ಮೆಗಳ ನೋಂದಣಿ ಬುಕ್ಕಿನಲ್ಲಿಯ ಯಾವದೇ ದಾಖಲೆ ಅಥವಾ ದಾಖಲೆಯ ಭಾಗವನ್ನು, ದಸ್ತೈವಜು, ನೋಟೀಸು, ಲೆಖ್ಖ ಮತ್ತು ಲೆಖ್ಖ ತಪಾಸಣೆಯ ವರದಿ ಮುಂತಾದವುಗಳನ್ನು ತಪಾಸ ಮಾಡಲಿಕ್ಕೆ ದಿನವೊಂದಕ್ಕೆ ೧ ರೂಪಾಯಿ ಫಿಯಂತೆ ಕೊಡಬೇಕಾಗುವದು.

ಆದರೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಯೋಗ್ಯ ಸಂದರ್ಭದಲ್ಲಿ ಮೇಲ್ಕಾಣಿಸಿದ ಯಾವದೇ ಕಾಗದ ಲೆಖ್ಖ ಪತ್ರಗಳನ್ನು ತಪಾಸ ಮಾಡಲಿಕ್ಕೆ ಕಡಿಮೆ ಫೀಯನ್ನು ಸಹ ತಮಗೆಯೋಗ್ಯ ಕಂಡಂತೆ ತೆಗೆದು ಕೊಳ್ಳಲು ಪರವಾನಗಿ ಕೊಡಬಹುದು.

ಆದರೆ ತಪಾಸಣೆ ನಡೆದ ದಿವ್ಸ ಒಂದು ರೂಪಾಯಿಗಿಂತ ಕಡಿಮೆ ಯಾಗದಂತೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಮಂಜೂ ರಮಾಡಬೇಕು.

(೪) ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಮಾಡುವ ಮೇಲ್ವಿಚಾರಣೆಗೆ ಅಧೀನವಾಗಿ ಇಂಥ ಕಾಗದ ಪತ್ರಗಳ ತಪಾಸಣೆಯು ಆಫೀಸಿನ ವೇಳೆಯಲ್ಲಿ ನಡೆಯತಕ್ಕದ್ದು.

[೧೧] (೩೩) ನಿರ್ದಿಷ್ಟ ಪಡಿಸುವ ರುಸುಮು ಹಣವನ್ನು ಕೊಟ್ಟರೆ ಯಾವದೇ ಹಿತವಿದ್ದ ಮನುಷ್ಯನ ಅಥವಾ ಚಾರಿಟಿ ಕಮಿಶನರರ, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರ ಪರವಾನಗಿ ಪಡಕೊಂಡವರ ಅರ್ಜಿಯ ಮೇಲಿಂದ ಚಾರಿಟಿ ಕಮಿಶನರರು, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಕೆಳಗೆ ಕಾಣಿಸಿದ ಕಾಗದ ಪತ್ರಗಳ ಸರ್ಟಿಫಾಯಿಡ ಉತಾರಗಳನ್ನು ತಮ್ಮ ಸಹಿಯಿಂದ ಅಥವಾ ಈ ವಿಷಯದಲ್ಲಿ ಅಧಿಕಾರ ಹೊಂದಿದ ಅಧಿಕಾರಿಯ ಸಹಿಯಿಂದ ಕೊಡುವದು.

ಶೀ ನ. ನಿ. ನ.

(a) ಸಾರ್ವಜನಿಕ ಜಿಮ್ಮೆಗಳ ನೋಂದಣಿ ಪುಸ್ತಕದಲ್ಲಿಯ ದಾಖಲೆ ಅಥವಾ ಆದರ ಭಾಗ, ಯಾವದೇ ಹೇಳಿಕೆ, ನೋಟೀಸು, ಸೂಚನೆ, ಲೆಖ್ಖ, ಲೆಖ್ಖ ತಪಾಸಣೆಯು ವರದಿ ಅಥವಾ ಈ ಕಾಯುದೆಯ ಮೇರಿಗೆ ಹಾಜರ ಮಾಡಿದ ಇನ್ನಿತರ ದಸ್ತೈವಜು.

(b) ಈ ಕಾಯದೆ ಮೇರಿಗೆ ನಡೆದ ಚೌಕಶಿಯು ಪ್ರಕರಣಗಳು

(c) ಚಾರಿಟಿ ಕಮಿಶನರರ ಮುಂದೆ ನಡೆದ ಅಪೀಲಿನ ಪ್ರಕರಣಗಳು

(d) ಚಾರಿಟಿ ಕಮಿಶನರರು, ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಕೊಟ್ಟ ಯಾವದೇ ಸರ್ಟಿಫಿಕೇಟು.

(೨) ನಕಲುಗಳನ್ನು ಕೊಡುವದಕ್ಕಾಗಿ ತೆಗೆದು ಕೊಳ್ಳತಕ್ಕ ರುಸುಮು

(a) ೧೦೦ ಶಬ್ದಗಳು ಅಥವಾ ಅವರ ಭಾಗಕ್ಕೆ ನಾಲ್ಕು ಆಣೆ.

(b) ಸರ್ಟಿ ಫಾಯಿಡ ಉತಾರ ಬೇಕಾದಲ್ಲಿ ೧೦೦ ಶಬ್ದಗಳಿಗೆ ಅಥವಾ ಆದರ ಭಾಗಕ್ಕೆ ಫೆರಕಪಾ

(c) ಕೋಷ್ಟಕ ನಮೂನೆಯಲ್ಲಿ ದಸ್ತೈವಜ ತಯಾರಿಸಲ್ಪಟ್ಟರೆ ಮೇಲಿನ ದರದ ದುಪ್ಪಟ್ಟು ಕೊಡಬೇಕಾಗುವದು.

(d) ನಕಲನ್ನು ತಯಾರಮಾಡುವದಕ್ಕಾಗಿ ಉಪಯೋಗಿಸಿದ ದಪ್ಪ ಕಾಗದದ ಬಗ್ಗೆ ಪ್ರತಿಯೊಂದು ಕಾಗದಕ್ಕೆ ೨ ದುಡ್ಡಿನಂತೆ ಹೆಚ್ಚಿಗೆ ರುಸುವು ಕೊಡಬೇಕಾಗುವದು.

೧೨ (೨೪) ಆಸ್ತಿ ಪರಾಧೀನ ಮಾಡುವ ಬಗ್ಗೆ ೩೬ನೇ ಕಲಮಿನ ಮೇರಿಗೆ ಮಂಜೂರಿ ಬಗ್ಗೆ ಮಾಡುವ ಅರ್ಜಿಯಲ್ಲಿ ಉಳಿದ ವಿಷಯಗಳೊಡನೆ ಕೆಳಗೆ ಕಾಣಿಸಿದ ವಿಷಯಗಳು ಇರತಕ್ಕದ್ದು.

(i) ಸ್ಥಾವರ ಆಸ್ತಿಯನ್ನು ಪರಾಧೀನ ಮಾಡುವ ಬಗ್ಗೆ ಜಿಮ್ಮೆಯನ್ನುಂಟು ಮಾಡಿದ ದಸ್ತೈವಜಿನಲ್ಲಿ ಯಾವದೇ ಕರಾರುಗಳು ನಮೂದ ಇರುತ್ತವೆಯೋ ಹೇಗೆ?

ಶೀ. ನ. ನಿ. ನ.

(ii) ಪರಾಧೀನ ಮಾಡುವ ಬಗ್ಗೆ ಅವಶ್ಯಕತೆ ಏನು?

(iii) ಸಾರ್ವಜನಿಕ ಜಿಮ್ಮೆ ಆಸ್ತಿಯು ಹಿತದ ಸಂಬಂಧವಾಗಿ ಅಂಥ ಪರಾಧೀನವಾಗುವದು ಇರುತ್ತದೆಯೋ?

(IV) ಭಾಡೆ ಅಥವಾ ಲಾವಣಿ ಕೊಡುವದು ಇದ್ದಲ್ಲಿ ಹಿಂದಿನ ಭಾಡೆ ಅಥವಾ ಲಾವಣಿ ಕರಾರುಗಳು ಇದ್ದರೆ ಅವುಗಳ ಬಗ್ಗೆ ಶಕ್ಯ ವಿದ್ದ ಮಟ್ಟಿಗೆ ತಜ್ಞರ ಆಸ್ತಿ ಕಿಮ್ಮತ್ತಿನ ವರದಿ ಸಮೇತ ಅಂಥ ಅರ್ಜಿಯನ್ನು ಕಳಿಸಬೇಕು.

(೨) ಮಂಜೂರಿಯನ್ನು ಕೊಡವದಕ್ಕಿಂತ ಅಥವಾ ಅಲ್ಲಗಳೆಯುವ ಪೂರ್ವದಲ್ಲಿ ಚಾರಿಟಿ ಕಮಿಶನರರು ಅವಶ್ಯಕಂಡ ತಪಾಸಣೆಯನ್ನು ಮಾಡುವರು.

(೩) ಚಾರಿಟಿ ಕಮಿಶನರರು ಮಂಜೂರಿಕೊಡುವ ಪೂರ್ವದಲ್ಲಿ ತಮಗೆ ಯೋಗ್ಯ ಕಂಡಂತೆ ಕರಾರುಗಳನ್ನು ಹಾಕಬಹುದು ಅಥವಾ ಆಜ್ಞೆ ವಿಧಿಸಬಹುದು.

೧೩. (೨) ೫೦ನೇ ಕಲಮಿನಲ್ಲಿ ನಮೂದಮಾಡಿದ ಮೇರೆಗೆ ದಾವೆಯನ್ನು ಮಾಡುವ ಬಗ್ಗೆ ಚಾರಿಟಿ ಕಮಿಶನರರ ಒಪ್ಪಿಗೆಯನ್ನು ಪಡಕೊಳ್ಳಲು ಯಾವದೇ ಹಿತವಿದ್ದ ಮನುಷ್ಯನು ಮಾಡಿಕೊಳ್ಳುವ ಅರ್ಜಿಯಲ್ಲಿ ಸಂಕ್ಷೇಪವಾಗಿ ಮಹತ್ವದ ವಿಷಯಗಳನ್ನು ಬರೆಯುವದಲ್ಲದೆ ಕೆಳಗೆ ಕಾಣಿಸಿದ ವಿಷಯಗಳನ್ನು ಸಹ ಕಾಣಿಸಬೇಕು.

(a) ಅರ್ಜಿದಾರರ ಹೆಸರು ಧಂದೆ ಮತ್ತು ವಿಳಾಸ.

(b) ಜಿಮ್ಮೆಯ ಹೆಸರು ಮತ್ತು ವರ್ಣನೆ ಮತ್ತು ಅದರ ಕಚೇರಿಯ ವಿಳಾಸ.

(c) ಸಾರ್ವಜನಿಕ ಜಿಮ್ಮೆಗಳ ನೋಂದಣಿ ಪುಸ್ತಕದಲ್ಲಿ ನೋಂದ ಆಗಿದ್ದರೆ ಅದರ ನಂಬರು

(d) ಜಿಮ್ಮೆ ಆಸ್ತಿಗಳ ಅಜಮಾಸು ಬೆಲೆ.

ಶೀ. ನ. ವಿ. ನ.

(e) ಜಿಮ್ಮೆ ಆಸ್ತಿಯ ಅಜಮಾಸು ವಾರ್ಷಿಕ ಉತ್ಪನ್ನ.

(f) ಜಿಮ್ಮೆದಾರರ ಮತ್ತು ವ್ಯವಸ್ಥಾಪಕರ ಹೆಸರು ಮತ್ತು ವಿಳಾಸ.

(g) ಜಿಮ್ಮೆಯ ಉದ್ದೇಶಗಳು.

(h) ಜಿಮ್ಮೆ ಆಸ್ತಿಯಲ್ಲಿ ಅರ್ಜಿದಾರನ ಹಿತಸಂಬಂಧವು ಹೇಗೆ?

(i) ಸದ್ರಿ ದಾವೆಯಲ್ಲಿ ನಮೂದ ಮಾಡತಕ್ಕ ದಾವಾದ ಕಾರಣ ದಾವೇದ ಆಧಾರಕ್ಕಾಗಿ ಮಾಡಿಸತಕ್ಕಮಹತ್ವದ ಪುರಾವೆ ಮತ್ತು ಬೇಡಿಕೆಗಳು.

(j) ಅವಲಂಬಿಸುವ ಕಾಗದ ಪತ್ರಗಳ ತಪಶೀಲು.

(k) ದಾವೇದ ವೆಚ್ಚವನ್ನು ಅರ್ಜಿದಾರರು ಹೇಗೆ ವಹಿಸುವರು.

(L) ಸಿವಿಲ್ ಪ್ರೊಸೀಜರ ಕೋಡಿನ ೯೨ನೇ ಕಲಮಿನ ಮೇರೆಗೆ ಅರ್ಜಿದಾರರು ಈ ಪೂರ್ವದಲ್ಲಿ ಜಿಮ್ಮೆ ಆಸ್ತಿಯ ಬಗ್ಗೆ ಅರ್ಜಿಯನ್ನು ಮಾಡಿದ್ದರೆ ಅವರಿಗೆ ತಿಳಿದ ಮಟ್ಟಿಗೆ ಯಾರಾದರೂ ಅಂಥ ಅರ್ಜಿ ಮಾಡಿದ್ದರೆ ಅಂಥ ಅರ್ಜಿಯ ವಿವರಣೆ ಮತ್ತು ಅದರ ಪರಿಣಾಮ.

(೨) ಶಕ್ಯವಿದ್ದಮಟ್ಟಿಗೆ ಅಂಥ ಅರ್ಜಿಯಜೊತೆಗೆ ಸಂಬಂಧಪಟ್ಟ ಕಾಗದ ಪತ್ರಗಳ ನಕಲುಗಳನ್ನು ಹಾಜರ ಪಡಿಸಬೇಕು.

(೩) ಅರ್ಜಿದಾರರ ಹೇಳಿಕೆಯನ್ನು ಕೇಳಿಕೊಂಡಮೇಲೆ ಮತ್ತು ಯೋಗ್ಯವೆನಿಸಿದ ಮೇರೆಗೆ ತಪಾಸಣೆ ಮಾಡಿದ ಮೇಲೆ ಚಾರಿಟಿ ಕಮೀಶನರರು ಸದ್ರಿ ಅರ್ಜಿಯನ್ನು ಮಂಜೂರ ಮಾಡಬಹುದು ಅಥವಾ ರಹಿತಪಡಿಸಬಹುದು. ಆದರೆ ಮಂಜೂರಿ ಕೊಡುವ ಪೂರ್ವದಲ್ಲಿ ಟ್ರಸ್ಟಿ ಜನರು ತಮ್ಮ ಹೇಳಿಕೆಯನ್ನು ಕೊಡಲಿಕ್ಕೆ ಅವಕಾಶವನ್ನು ಕೊಡಲಾಗುವದು.

(೪) ಚಾರಿಟಿ ಕಮೀಶನರರು ಒಪ್ಪಿಗೆಯನ್ನು ಕೊಟ್ಟ ಮೇಲೆ ದಾವೆ ದಾಖಲ ಮಾಡುವ ಪೂರ್ವದಲ್ಲಿ ಅಫಲರ್ಜಿಯ ಮೇಲೆ ಚಾರಿಟಿ ಕಮೀಶನರರ ಒಪ್ಪಿಗೆಯನ್ನು ಪಡಕೊಂಡ ಬಗ್ಗೆ ಬರೆಯಬೇಕು.

(೬) ೫೦ನೇ ಕಲಮಿನ ಮೇರೆಗೆ ೧೧ನೇ ಪರಿಶಿಷ್ಟದಲ್ಲಿ ಕಾಣಿಸಿದ ನಮೂನೆಯ ಪ್ರಕಾರ ಚಾರಿಟಿ ಕಮೀಶನರರಿಗೆ ಮಾಡತಕ್ಕ ಅರ್ಜಿಗಳ ನೋಂದಣಿ ಪುಸ್ತಕವನ್ನು ಅವರ ಆಫೀಸಿನಲ್ಲಿ ಕಾಯ್ದಿಡುವರು.

ಕೇ. ನ. ನಿ. ನ.

೧೪ (೩೦) ೧೩ನೇ ಪರಿಶಿಷ್ಟದಲ್ಲಿ ಕಾಣಿಸಿದ ನಮೂನೆಯ ಪ್ರಕಾರ ಧರ್ಮಾದಾಯದ ಲೆಖ್ಖವನ್ನು ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರಿಗೆ ಕೊಡಬೇಕಾಗುವದು.

(೨) ಹೀಗೆ ಕೊಟ್ಟ ಲೆಖ್ಖದ ಫೇರ ತಪಾಸಣೆಗಾಗಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರುಧರ್ಮಾದಾಯವನ್ನು ಕೂಡಿಸುವಅಥವಾ ಕೇಳುವ ಮನುಷ್ಯನ ಲೆಖ್ಖದ ಪುಸ್ತಕಗಳನ್ನು ಹಾಜರ ಪಡಿಸಿಕೊಳ್ಳಬಹುದು. ಅವಶ್ಯಕಂಡರೆ ಒಬ್ಬಲೆಖ್ಖ ತಪಾಸಣೆಗಾರರನ್ನು ನೇಮಿಸಿಗೊಂಡು ಲೆಖ್ಖ ತಪಾಸಣೆ ಮಾಡಿಸಬಹುದು ಮತ್ತು ಅದರ ವೆಚ್ಚವನ್ನು ಕೊಡಲಿಕ್ಕೆ ಅಜ್ಞೆಮಾಡಬಹುದು.

(೩) ನಿರ್ದಿಷ್ಟಪಡಿಸಿದ ಧರ್ಮಾರ್ಥ ಅಥವಾ ಧಾರ್ಮಿಕ ಉದ್ದೇಶಕ್ಕಾಗಿ ಧರ್ಮಾದಾಯವು ಇದ್ದು ಅದರ ಸಲುವಾಗಿ ಉಪಯೋಗಿಸದಿದ್ದರೆ ಅಥವಾ ಕೆಲವು ಭಾಗ ಉಪಯೋಗಿಸಿದ್ದರೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರು ಅಂಥ ಧರ್ಮಾರ್ಥ ಅಥವಾ ಧಾರ್ಮಿಕ ಉದ್ದೇಶಕ್ಕಾಗಿ ಧರ್ಮಾದಾಯವನ್ನು ಉಪಯೋಗಿಸಬೇಕೆಂದು ಆಜ್ಞೆಯನ್ನು ವಿಧಿಸಬಹುದು.

(೪) ಇನ್ನಿತರ ಪ್ರಸಂಗದಲ್ಲಿ ೫೫ನೇ ಕಲಮಿನ ಮೇರೆಗೆ ಹಣವನ್ನು ಹೇಗೆ ಬಳಿಸಬೇಕೆಂಬುವ ಬಗ್ಗೆ ಕೋರ್ಟಿನ ಆಜ್ಞೆಯನ್ನು ಪಡೆಯುವದು. ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮಿಶನರರ ಅಭಿಪ್ರಾಯದ ಮೇರೆಗೆ ಅವಶ್ಯವೆಂದು ಕಂಡು ಬಂದರೆ ಅವರು ಚಾರಿಟಿ ಕಮೀಶನರರ ಕಡೆಗೆ ವರದಿ ಮಾಡುವರು ಮತ್ತು ತಮಗೆ ಯೋಗ್ಯಕಂಡಂತೆ ಕೋರ್ಟಿನ ಅಖೈರ ನಿರ್ಣಯವಾಗುವವರೆಗೆ ಸದ್ರಿ ಹಣವನ್ನು ಎಲ್ಲಿ ಯಾದರು ಠೇವಾಗಿ ಇಡಬೇಕೆಂದು ಅಪ್ಪಣೆ ಮಾಡುವರು.

೧೫ (೩೧) ಚಾರಿಟಿ ಕಮೀಶನರರಿಂದ ಬಂದ ನೋಟೀಸು ಮುಟ್ಟಿದ ೩ ತಿಂಗಳೊಳಗಾಗಿ ೫೫ನೇ ಕಲಮಿನ ಮೇರೆಗೆ ಕೋರ್ಟಿನ ಆಜ್ಞೆಯನ್ನು ಪಡೆಯಲಿಕ್ಕೆ ಜವಾಬ್ದಾರನು ಅರ್ಜಿ ಮಾಡಬೇಕು.

ಶೀ. ನ. ನಿ ನ.

ಆದರೆ ಚಾರಿಟಿ ಕಮೀಶನರರು ತಮ್ಮ ಇಚ್ಛೆಯ ಮೇರೆಗೆ ಹೀಗೆ ಅರ್ಜಿ ಮಾಡಿಕೊಳ್ಳಲಿಕ್ಕೆ ಅವಧಿಯನ್ನು ಬೆಳಿಸಬಹುದು.

೧೬ (೩೨) ಮಂಜೂರ ಆದ ಸಂಸ್ಥೆಯವರಿಂದ ಕೊಡಲ್ಪಟ್ಟ ಲೌಕಿಕ ಶಿಕ್ಷಣಕ್ಕಾಗಿ ಪ್ರತ್ಯೇಕವಾಗಿ ಅಥವಾ ಔಷಧೋಪಚಾರದ ಸಲುವಾಗಿ ಪ್ರತ್ಯೇಕವಾಗಿ ಕೊಟ್ಟ ಜಿನ್ನಿ ಆಸ್ತಿಯನ್ನು ಹೊರ್ತುಪಡಿಸಿ ಉಳಿದ ಯಾವದೇ ಸಾರ್ವಜನಿಕ ಜಿನ್ನಿಯು ಪ್ರತಿವರ್ಷ ಒಟ್ಟು ಉತ್ಪನ್ನದಲ್ಲಿ ಅಥವಾ ಸಾರ್ವಜನಿಕ ಜಿನ್ನಿ ಆಸ್ತಿಯು ಧರ್ಮಾದಾವ ಉತ್ಪನ್ನವಿದ್ದಲ್ಲಿ ಅದರ ವಾರ್ಷಿಕ ಸಂಗ್ರಹದಲ್ಲಿ ೧೦೦ಕ್ಕೆ ೨ರಂತೆ ಸಾರ್ವಜನಿಕ ವಿಶ್ವಸ್ಥ ಆಸ್ತಿಯ ಆಡಳಿತೆಯ ನಿಧಿಗೆ ಕೊಡಬೇಕಾಗುವದು. ವಿವರಣೆ:- ಈ ನಿಯಮದ ಉದ್ದೇಶಗಳಿಗಾಗಿ-

(a) ಲೌಕಿಕ ಶಿಕ್ಷಣವೆಂದರೆ ಲೌಕಿಕ ವಿದ್ಯೆಯನ್ನು ಕೊಡುವದು ಮತ್ತು ಅಂಥ ಶಿಕ್ಷಣವನ್ನು ಹೊಂದತಕ್ಕ ವಿದ್ಯಾರ್ಥಿಗಳ ಸಲುವಾಗಿ ಭೋಜನಾಲಯಗಳನ್ನು ಇಡುವದು, ಅಂಥ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಬಕ್ಷೀಸ, ಸಾಲ, ಅಥವಾ ಬೇರೆಸಹಾಯ ಮಾಡುವದು, ವಾಚನಾಲಯಗಳನ್ನು ನಡಿಸುವದು.

(೨) ಪ್ರತಿವರ್ಷ ಮಾರ್ಚ ೩೧ ನೇ ತಾರೀಖಿಗೆ ಮುಗಿಯುವ ಅಥವಾ ೩೩ ನೇ ಕಲಮಿನ ೧ ನೇ ಪೋಟ ಕಲಮಿನ ಮೇರೆಗೆ ಚಾರಿಟಿ ಕಮೀಶನರರು ಯಾವದೇ ಜಿನ್ನಿಯ ವಿಷಯಕ್ಕೆ ಅಥವಾ ಜಿನ್ನಿಗಳ ವರ್ಗದ ವಿಷಯಕ್ಕೆ ನಿರ್ದಿಷ್ಟ ಪಡಿಸಿದ ದಿವಸಕ್ಕೆ ಮುಗಿಯುವ ೧೨ ತಿಂಗಳ ಅವಧಿಯಲ್ಲಿ ವಸೂಲಾದ ಅಥವಾ ಮುಟ್ಟಿದ ಒಟ್ಟು ವಾರ್ಷಿಕ ಉತ್ಪನ್ನದ ಮೇಲೆ ವಂತಿಗೆ ಹಣವನ್ನು ನಿರ್ಧರಿಸಲಾಗುವದು.

(೩) ಮೇಲ್ಕಾಣಿಸಿದ ಮೇರೆಗೆ ವಂತಿಗೆ ಹಣವನ್ನು ನಿರ್ಧರಿಸುವ ಬಗ್ಗೆ ಒಟ್ಟು ವಾರ್ಷಿಕ ಉತ್ಪನ್ನ ಅಥವಾ ಮುಟ್ಟಿದ ಹಣವನ್ನು ಲೆಖ್ಖ ಮಾಡಬೇಕಾದರೆ ಕೆಳಗೆ ಕಾಣಿಸಿದ ಕಡಿತಗಳನ್ನು ಲೆಖ್ಖಕ್ಕೆ ಹಿಡಿಯಬೇಕು.

(೧) ತನ್ನ ಉದ್ದೇಶಗಳಲ್ಲಿ ಒಂದಾದ ಲೌಕಿಕ ವಿದ್ಯೆಯನ್ನು ಮಂಜೂರ ಮಾಡಲ್ಪಟ್ಟ ಸಂಸ್ಥೆಯ ಮುಖಾಂತರ ಕೊಡಿಸುವ ಸಾರ್ವಜನಿಕ

ಶೀ. ನ. ಸಿ. ಸ.
ಜಿಮ್ಮೆಯು ಇದ್ದರೆ ಆ ಉದ್ದೇಶಕ್ಕಾಗಿ ಒಟ್ಟು ಉತ್ಪನ್ನದಲ್ಲಿ ಖರ್ಚು ಮಾಡಿದ ಭಾಗವು

(ii) ತನ್ನ ಉದ್ದೇಶಗಳಲ್ಲಿ ಒಂದಾದ ಔಷಧೋಪಚಾರನ್ನು ಮಾಡುವ ಸಾರ್ವಜನಿಕ ಜಿಮ್ಮೆಯು ಇದ್ದರೆ ಆ ಉದ್ದೇಶಕ್ಕಾಗಿ ಒಟ್ಟು ಉತ್ಪನ್ನದಲ್ಲಿ ಖರ್ಚು ಮಾಡಿದ ಭಾಗವು

(iii) ಸಾರ್ವಜನಿಕ ಜಿಮ್ಮೆದ ಮೂಲ ಆಸ್ತಿಗೆ ಸೇರಬೇಕೆಂಬ ಆದೇಶಕ್ಕೆ ಅಧೀನವಾಗಿ ಕೊಟ್ಟ ದಾನ.

(IV) ಬೇರೆ ಧರ್ಮಾದಾವ ಸಹಿತ ಸಾರ್ವಜನಿಕ ಜಿಮ್ಮೆ ಆಸ್ತಿಗಳಿಂದ ಬಂದ ದಾನ

(V) ಸರಕಾರದಿಂದ ಅಥವಾ ಸ್ಥಾನಿಕ ಅಧಿಕಾರಿಗಳಿಂದ ದೊರೆತ ಸಹಾಯಧನ.

(VI) ಭಾಡಿಗೆ ಕೊಡದೆ ಇದ್ದ ಮತ್ತು ಉತ್ಪನ್ನ ಬಾರದೆ ಇದ್ದ ಜಿಮ್ಮೆ ಸಂಬಂಧಪಟ್ಟ ಇಮಾರತಿಗಳ ಒಟ್ಟು ವಾರ್ಷಿಕ ಭಾಡೆಯ ಆಕರಣಿ ಮಾಡಿ ಅದರ ೧೦೦ ಕ್ಕೆ $8\frac{1}{3}$ ದಷ್ಟು ವಾರ್ಷಿಕ ರಿಪೇರಿ ಬಗ್ಗೆ ಮಂಜೂರ ಮಾಡಿದ್ದು.

(VII) ಇಮಾರತಿಗಳ ಜೀರ್ಣೋದ್ಧಾರದ ಬಗ್ಗೆ (ಡೆಪ್ರಿಸಿ ಎಶನ್ ಫಂಡು) ಬೆಲೆ ಕಡಿಮೆ ಆದಾಗ್ಗೆ ಉಪಯೋಗಿಸುವ ನಿಧಿ ಇದ್ದರೆ ಅದರ ಮೇಲಿನ ಬಡ್ಡಿ.

(VIII) ಸಾಲವು ಹೆಚ್ಚಾದಾಗ್ಗೆ ಕೊಡುವ ಬಗ್ಗೆ ಕಾಯ್ದಿಟ್ಟ ನಿಧಿ [ಸಿಂಕಿಂಗ ಫಂಡು] ಇದ್ದರೆ. ಸಾಲಗಳನ್ನು ತಿರುಗಿ ಕೊಡುವದಕ್ಕಾಗಿ [ಸಿಂಕಿಂಗ ಫಂಡು] ಸಾಲವು ಹೆಚ್ಚಾದಾಗ್ಗೆ ಕೊಡುವ ಬಗ್ಗೆ ಕಾಯ್ದಿಟ್ಟ ನಿಧಿ ಇದ್ದರೆ ಅದರ ಮೇಲಿನ ಬಡ್ಡಿ.

(IX) ಬೇಸಾಯದ ಕೆಲ್ಸಗಳಾಗಿ ಉಪಯೋಗಿಸಿದ ಜಮೀನುಗಳಿಂದ ಬಂದ ಉತ್ಪನ್ನದಿಂದ.

(a) ಜಿಮ್ಮೆ ಆಸ್ತಿಯಿಂದ ಕೊಡುವದಿದ್ದರೆ ತೆರಿಗೆ ಹಣ ಅಥವಾ ಲೋಕಲ್ ಫಂಡು.

(b) ಜಿಮ್ಮೆಯಿಂದ ಲಾವಣಿ ಹಿಡಿದದ್ದಾಗಿದ್ದರೆ ಭೂಮಿಯ ಒಡೆಯನಿಗೆ ಲಾವಣಿ ಹಣ ಕೊಡುವದು.

ಶೀ. ನ. ನಿ. ನ.

(c) ಭೂಮಿಗಳನ್ನು ಜಿಮ್ಮೆಯು ವತಿಯಿಂದ ಸಾಗು ಮಾಡಿದ್ದರೆ ಹುಟ್ಟುವಳಿಯ ಖರ್ಚು.

(X) ಬಿನ್ ಶೇತಕಿ ಉದ್ದೇಶಕ್ಕಾಗಿ ಉಪಯೋಗಿಸಲ್ಪಟ್ಟ ಭೂಮಿ [ಇಮಾರತಿಗಳು ಸಹಿತ] ಗಳಿಂದ ಬಂದ ಉತ್ಪನ್ನದಲ್ಲಿ.

(a) ಹಪ್ತೆ, ಕರ, ಬೇರೆ ಸರಕಾರಕ್ಕೆ ಕೊಡತಕ್ಕ ಹಣ. ಮತ್ತು ಮುನಸಿಪಾಲ್ಟಿ ಮತ್ತು ಬೇರೆ ತೆರಿಗೆ ಜಿಮ್ಮೆ ಆಸ್ತಿಯು ವತಿಯಿಂದ ಕೊಡ ತಕ್ಕವುಗಳು.

(b) ಭೂಮಿಯ ಒಡೆಯರಿಗೆ ಕೊಡತಕ್ಕ ಭೂಬಾಡೆ ಹಣ.

(c) ಇಮಾರತಿಗಳ ವಿಮಾ ಇಳಿಸಿದ್ದರೆ ಅವರ ಹಣ.

(d) ಇಮಾರತಿಗಳ ಒಟ್ಟು ಉತ್ಪನ್ನದಲ್ಲಿ ೧೦೦ ಕ್ಕೆ 8⅓ ದಂತೆ ವಾರ್ಷಿಕ ರಿಪೇರಿ ಖರ್ಚು.

(e) ಭಾಡೆ ಕೊಟ್ಟ ಆಸ್ತಿಗಳ ಭಾಡೆ ಹಣವನ್ನು ವಸೂಲ ಮಾಡುವ ದಕ್ಕಾಗಿ ೧೦೦ ಕ್ಕೆ ೪ ರಂತೆ ವಸೂಲಿ ಖರ್ಚು.

(೪) ಸಾರ್ವಜನಿಕ ಜಿಮ್ಮೆಯು ವತಿಯಿಂದ ಯಾವದಾದರು ವ್ಯವ ಹಾರ ಅಥವಾ ವ್ಯಾಪಾರವನ್ನು ನಡಿಸಿದ್ದರೆ ಅಂಥ ವ್ಯವಹಾರ ಅಥವಾ ವ್ಯಾಪಾರದ ವಾರ್ಷಿಕ ಒಟ್ಟು ಲಾಭದ ಮೇಲೆ ವಂತಿಗೆ ಹಣವನ್ನು ನಿರ್ಧರಿ ಸುವದು

(೫) ಈ ಹಿಂದೆ ಕಾಣಿಸಿದ ಪೋಟ ನಿಯಮಗಳ ಮೇರೆಗೆ ಕೊಡ ಬಹುದಾದ ವಂತಿಗೆ ಹಣವು ೨೦೦/– ರೂಪಾಯಿಗಳಿಗಿಂತ ಮೀರಿದ್ದರೆ ಎರಡು ಸರಿಯಾದ ಕಂತುಗಳಿಂದ ಕೊಡಬಹುದು. ಮೊದಲನೇ ಕಂತು ಮತ್ತು ಎರಡನೇ ಕಂತುಗಳು ೩೩ ನೇ ನಿಯಮದ ೧ ನೇ ಪೋಟ ನಿಯ ಮದಲ್ಲಿ ತಿಳಿಸಿದ ಮೇರೆಗೆ ಅನುಕ್ರಮವಾಗಿ ನೋಟೀಸು ಮುಟ್ಟಿದ ೧ ತಿಂಗಳ ಮತ್ತು ೪ ತಿಂಗಳ ಅವಧಿಯಲ್ಲಿ ಕೊಡಬೇಕು.

(೧೭) (೩೩) (೧) ಸಾರ್ವಜನಿಕ ಜಿಮ್ಮೆಯು ವತಿಯಿಂದ ಕೊಡಬಹು ದಾದ ವಂತಿಗೆ ಹಣವನ್ನು ನಿರ್ದಿಷ್ಟ ಪಡಿಸಿದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟ ಕಮಿಶನರರು ೧೫ ನೇ ಪರಿಶಿಷ್ಟದ ನಮೂನೆಯಂತೆ ಅಥವಾ ಸಾರ್ವಜನಿಕ ಜಿಮ್ಮೆಯು ಕೇವಲ ಧರ್ಮಾದಾಯ ಇದ್ದರೆ ೧೫ 'ಅ'

ಶೀ ನ. ನಿ. ನ.

ಪರಿಶಿಷ್ಟದ ನಮೂನೆಯಂತೆ ಬೇಡಿಕೆಯ ನೋಟೀಸನ್ನು ಜಿಮ್ಮೆದಾರ ವ್ಯವಸ್ಥಾಪಕ ಅಥವಾ ಧರ್ಮಾದಾವ ಕೂಡಿಸುವವರ ಮೇಲೆ ತೆಗೆಯುವರು ಮತ್ತು ಅಂಥ ನೋಟೀಸಿನಲ್ಲಿ ಕೊಡಬಹುದಾದ ಹಣ ಮತ್ತು ಯಾವ ತಾರೀಖಿಗೆ ಹಣ ಕೊಡಬೇಕೆಂಬುವ ತಾರೀಖು ನಮೂದ ಮಾಡಲ್ಪಟ್ಟಿರುತ್ತವೆ.

(೨) ಹೀಗೆ ಬೇಡಿಕೆಯು ನೋಟೀಸು ಬಂದ ೧೫ ದಿವ್ಸಗಳಲ್ಲಿ ಜಿಮ್ಮೆದಾರನು ಅಥವಾ ವ್ಯವಸ್ಥಾಪಕನು ವಂತಿಗೆ ಹಣದ ಬಗ್ಗೆ ತಕರಾರ ಮಾಡುವದಾದರೆ ತನ್ನ ಎಲ್ಲ ತಕರಾರುಗಳನ್ನು ಕಾಣಿಸಿ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಕಡೆಗೆ ಅರ್ಜಿಯನ್ನು ಕೊಡಬಹುದು. ಬೇಡಿಕೆಯನ್ನು ಮಾಡಿದ ಹಣವನ್ನು ಮೊದಲು ಠೇವಾಗಿ ಇಡದ ಹೊರ್ತು ಯಾವ ತಕರಾರುಗಳು ನಡೆಯಲಾರವು.

(೩) ಈ ಪ್ರಕಾರ ತಕರಾರುಗಳು ಬಂದ ಮೇಲೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಅವುಗಳನ್ನು ೧೭ ನೇ ಪರಿಶಿಷ್ಟದ ನಮೂನೆಯಂತೆ ಇಟ್ಟ ನೋಂದಣಿ ಬುಕ್ಕಿನಲ್ಲಿ ದಾಖಲ ಮಾಡಿಸುವರು. ಮತ್ತು ಈ ಬಗ್ಗೆ ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರು ಮಾಡುವ ನಿರ್ಣಯವೇ ಕೊನೆಯದಾಗುವದು.

೧೮ (೩೭) ೭೦ ನೇ ಕಲಮಿನ ಮೇರೆಗೆ ಅಪೀಲು– ಡೆಪ್ಯುಟಿ ಅಥವಾ ಅಸಿಸ್ಟಂಟ ಚಾರಿಟಿ ಕಮೀಶನರರ ಹುಕುಮಿನ ಅಥವಾ ನಿರ್ಣಯದ ವಿರುದ್ಧವಾಗಿ ಚಾರಿಟಿ ಕಮೀಶನರರಿಗೆ ಮಾಡತಕ್ಕ ಅಪೀಲನ್ನು ಅಪೆಲಂಟನಾಗಲಿ ಅಥವಾ ಅತನ ವಕೀಲರಾಗಿ ಸಹಿ ಮಾಡತಕ್ಕದ್ದು ಈ ಅಪೀಲು ಅರ್ಜಿಯಲ್ಲಿ ಸಂಕ್ಷೇಪವಾಗಿ ಮತ್ತು ಬೇರೆ ಬೇರೆ ತಲೆ ಬರಹಗಳ ಕೆಳಗೆ ಕೆಳಗಿನ ಅಧಿಕಾರಿಗಳ ಹುಕುಮು ಅಥವಾ ನಿರ್ಣಯದ ವಿರುದ್ಧ ತಕರಾರುಗಳ ಕಾರಣಗಳನ್ನು ಕಾಣಿಸಬೇಕು. ಅಂಥ ಕಾರಣಗಳಿಗೆ ನಂಬರ ಹಾಕುತ್ತಾ ಹೋಗಬೇಕು.

(೨) ಇಂಥ ಅಪೀಲನ್ನು ಚಾರಿಟಿ ಕಮೀಶನರರ ಕಡೆಗೆ ರಜಿಸ್ಟರ ಟಪಾಲ ಮುಖಾಂತರ ಅಥವಾ ಸ್ವತಃ ಅಥವಾ ವಕೀಲರ ಮುಖಾಂತರ

ಶೀ ನ ನಿ ನ

ಹಾಜರ ಮಾಡಬಹುದು. ಮತ್ತು ಸದ್ರಿ ಅಪೀಲಿನ ಜೊತೆಗೆ ಕೆಳಗೆ ಕಾಣಿಸಿದ ಕಾಗದ ಪತ್ರಗಳನ್ನು ಹಾಜರ ಮಾಡಬೇಕು.

(a) ಯಾವ ಹುಕುಂ ಅಥವಾ ನಿರ್ಣಯದ ವಿರುದ್ಧ ಅಪೀಲು ಮಾಡಿರುತ್ತದೆಯೋ ಅವರ ಸರ್ಟಿಫಾಯಿಡ ಉತಾರ.

(d) ಅಂಥ ಅಪೀಲಿನಲ್ಲಿ ಕೊನೆಯ ನಿರ್ಣಯವನ್ನು ಮಾಡಿದ್ದಾದರೆ ಎಷ್ಟು ಜನರಿಗೆ ಸಂಬಂಧಪಟ್ಟದ್ದಾಗುತ್ತದೆಯೋ ಅಷ್ಟು ಅಪೀಲ ನಕಲುಗಳು.

(೩) ಪ್ರತಿಯೊಬ್ಬ ಎದುರುಗಾರನ ಮೇಲೆ ನೋಟೀಸು ಜಾರಿ ಮಾಡುವ ಬಗ್ಗೆ ೦-೮-೦ ಆಣೆಯಂತೆ ಒಟ್ಟು ಲೆಖ್ಖ ಮಾಡಿ ಅಷ್ಟು ವೆಚ್ಚದ ಹಣವನ್ನು ಚಾರಿಟಿ ಕಮಿಶನರರ ಕಚೇರಿಯಲ್ಲಿ ಅಪೀಲು ಮಾಡಿದವರು ಕೊಡಬೇಕು.

(೪) ಅಪೀಲು ಚೌಕಸಿ ಮಾಡಿದ ನಂತರ ಚಾರಿಟಿ ಕಮಿಶನರರು ಆ ಕೂಡಲೆ ಅಥವಾ ಪಕ್ಷಗಾರರಿಗೆ ಅಥವಾ ಅವರ ವಕೀಲರಿಗೆ ತಿಳಿಸಿದ ದಿನಾಂಕಕ್ಕೆ ತಮ್ಮ ನಿರ್ಣಯವನ್ನು ಹೇಳುವರು.

(೫) ಚಾರಿಟಿ ಕಮಿಶನರರ ಕಚೇರಿಯಲ್ಲಿ ೧೭ ನೇ ಪರಿಶಿಷ್ಟದಲ್ಲಿಯ ನಮೂನೆಯಂತೆ ೭೦ ನೇ ಕಲಮಿನ ಮೇರೆಗೆ ಮಾಡಿದ ಅಪೀಲುಗಳ ನೋಂದಣಿ ಬುಕ್ಕು ಇಡಲ್ಪಡುವದು.

೧೯ (೩೮) ೭೧ ನೇ ಕಲಮಿನ ಮೇರೆಗೆ ಅಪೀಲು— ೫೧ ನೇ ಕಲಮು ೨ ನೇ ಪೋಟ ಕಲಮಿನ ಮೇರೆಗೆ ದಾವೇ ಮಾಡುವ ಬಗ್ಗೆ ಚಾರಿಟಿ ಕಮಿಶನರರು ತಿರಸ್ಕರಿಸಿದ ಹುಕುಮಿನ ವಿರುದ್ಧ ರೆವಿನ್ಯೂ ಟ್ರಾಯಿಬುನಲ್ಲಿಗೆ ಮಾಡಲ್ಪಡುವ ಅಪೀಲು ಯಾದಸ್ತಿಗೆ ಅಪೀಲು ಮಾಡುವ ಪಕ್ಷಗಾರರಾಗಲಿ ಅಥವಾ ಅವರ ವಕೀಲರಾಗಲಿ ಸಹಿ ಮಾಡತಕ್ಕದ್ದು ಮತ್ತು ಅಂಥ ಅಪೀಲು ಯಾದಸ್ತಿನ ಜೊತೆಗೆ ಚಾರಿಟಿ ಕಮಿಶನರರ ನಿರ್ಣಯದ ಸರ್ಟಿಫಾಯಿಡ ನಕಲು ಇಡಬೇಕು.

(೨) ಅಂಥ ಅಪೀಲು ಯಾದಸ್ತಿನಲ್ಲಿ ಸಂಕ್ಷೇಪವಾಗಿ ಬೇರೆ ಬೇರೆ ಕಲುಮುಗಳ ಕೆಳಗೆ ಕೆಳಗಿನ ಆಧಿಕಾರಿಗಳ ಅಂದರೆ ಚಾರಿಟಿ ಕಮಿಶನರರ

ಕಿ ನ ನಿ ನ
ಹುಕುಮಿನ ವಿರುದ್ಧ ಇದ್ದ ತಕರಾರುಗಳ ಕಾರಣಗಳನ್ನು ಬರೆಯಬೇಕು. ಅಂಥ ಕಾರಣಗಳಿಗೆ ಅನುಕ್ರಮ ನಂಬರು ಹಾಕಬೇಕು.

(೩) ಮುಂಬಯಿ ರೆವಿನ್ಯೂ ಟ್ರಾಯಬ್ಯುನಲ್ ಸೆಕ್ರೆಟರಿಯವರಿಗೆ ರಜಿಸ್ಟರ ಟಪಾಲಿನಿಂದ ಸ್ವತಃ ಅಥವಾ ವಕೀಲರ ಮುಖಾಂತರ ಅಪೀಲು ಹಾಜರ ಮಾಡಬೇಕು.

೨೦ (೪೦) ಸಾರ್ವಜನಿಕ ಹಿತಕ್ಕಾಗಿ ಜಿಮ್ಮೆಯನ್ನು ಕೊಡತಕ್ಕವನು ಚಾರಿಟಿ ಕಮಿಶನರರನ್ನು ಜಿಮ್ಮೆದಾರರನ್ನಾಗಿ ಮಾಡಬೇಕಾಗಿದ್ದರೆ ಅವರಿಗೆ ಲೇಖಿಯಿಂದ ಅರ್ಜಿ ಮಾಡಿ ಅವರ ಒಪ್ಪಿಗೆಯನ್ನು ಪಡಕೊಳ್ಳಬೇಕು. ಅಂಥ ಅರ್ಜಿಯ ಜೊತೆಗೆ ಜಿಮ್ಮೆ ಕಾಗದವನ್ನು ಕಳಿಸಬೇಕು.

೨೧ (೪೧) ಚಾರಿಟಿ ಕಮಿಶನರರು ಕೆಳಗೆ ಕಾಣಿಸಿದ ಜಿಮ್ಮೆಗಳಿಗೆ ಜಿಮ್ಮೆದಾರಿಕೆಯನ್ನು ಅಂಗೀಕರಿಸುವದಿಲ್ಲ.

(i) ಧಾರ್ಮಿಕ ಉದ್ದೇಶಗಳಿಗಾಗಿದ್ದ ಜಿಮ್ಮೆಯು. ಇಂಥ ಜಿಮ್ಮೆಯಲ್ಲಿ ಚಾರಿಟಿ ಕಮಿಶನರರು ಜಿಮ್ಮೆದಾರರಾಗಿ ಧಾರ್ಮಿಕ ವಿಧಿ ಅಥವಾ ಸಮಾರಂಭ ಅಥವಾ ಯಾವದೇ ವ್ಯಕ್ತಿಯ ಅಥವಾ ಸಂಸ್ಥೆಯ ಧಾರ್ಮಿಕ ರೀತಿ ಅಥವಾ ಶೀಲಗಳ ಪ್ರಶ್ನೆಗಳ ನಿರ್ಣಯವನ್ನು ಕೊಡುವದಿದ್ದರೆ.

(ii) ಯಾವದೇ ವ್ಯವಹಾರವನ್ನು ಸಾಗಿಸಲಿಕ್ಕೆ ಅಥವಾ ವ್ಯವಸ್ಥೆ ಮಾಡಲಿಕ್ಕೆ ಜಿಮ್ಮೆಯನ್ನು ಹುಟ್ಟಿಸಿದ್ದರೆ ಜಿಮ್ಮೆಯ ನಿಧಿ ಹಣವನ್ನು ವಸೂಲ ಮಾಡುವದಕ್ಕಾಗಿ ಅಂಥ ವ್ಯವಹಾರವನ್ನು ಬಂದು ಮಾಡುವದಕ್ಕೆ ಯಾವದೇ ವ್ಯವಹಾರವನ್ನು ಬಂದು ಮಾಡುವ ಅವಶ್ಯಕತೆಯು ಇದ್ದಲ್ಲಿ ಜಿಮ್ಮೆಯ ಆಸ್ತಿಯ ಖರ್ಚಿನಿಂದ ಚಾರಿಟಿಕಮಿಶನರರು ಸದ್ರಿ ವ್ಯವಹಾರವನ್ನು ಬಂದು ಮಾಡಿ ಲೆಕ್ಕಪತ್ರ ವಿಚಾರಣೆ ಮಾಡಲಿಕ್ಕೆ ಒಬ್ಬರನ್ನು ಅಥವಾ ಒಬ್ಬರಿಗಿಂತ ಹೆಚ್ಚು ಜನರನ್ನು ನೇಮಿಸಬಹುದು- ಮತ್ತು ಅಂಥ ವ್ಯವಹಾರದ ವ್ಯವಸ್ಥೆ ಮಾಡುವಾಗ್ಗೆ ಏನಾದರೂ ಹಾನಿ ತಟ್ಟಿದಲ್ಲಿ ಅದಕ್ಕೆ ಚಾರಿಟಿ ಕಮಿಶನರರು ಹೊಣೆಗಾರರಲ್ಲ.

ಶೆ. ನಿ. ನಿ. ಸ.

(೨೨) (೪೩)ಮೃತ್ಯುಪತ್ರದಿಂದ ಚಾರಿಟಿ ಕಮೀಶನರರನ್ನು ಜಿಮ್ಮೆದಾರರನ್ನಾಗಿ ನೇಮಿಸಿದಾಗ್ಗೆ ಅಂಥ ಮೃತ್ಯು ಪತ್ರವನ್ನು ನಡಿಸತಕ್ಕವನು ಅಥವಾ ಮೃತ್ಯು ಪತ್ರದಲ್ಲಿಯ ಆಸ್ತಿಯ ವ್ಯವಸ್ಥೆ ಮಾಡತಕ್ಕವನು ಪ್ರೋಬೇಟ ಆಸ್ತಿಯ ವ್ಯವಸ್ಥೆ ಪತ್ರವನ್ನು ಪಡಕೊಂಡ ನಂತರ ಚಾರಿಟಿ ಕಮೀಶನರರಿಗೆ ಅವರನ್ನು ಜಿಮ್ಮೆದಾರರನ್ನಾಗಿ ನೇಮಿಸಿ ಕೊಂಡ ಬಗ್ಗೆ ಲೇಖನದಿಂದ ತಿಳಿಸಬೇಕು. ಮತ್ತು ಅವರಿಗೆ ಮೃತ್ಯು ಪತ್ರದ ನಕಲು ಮತ್ತು ಜಿಮ್ಮೆಯನ್ನು ಹುಟ್ಟಿಸಿದ ಕಾಗದದ ನಕಲನ್ನು ಕಳಿಸುವದಲ್ಲದೆ ಜಿಮ್ಮೆಯ ವಿಷಯಕ್ಕೆ ಎಲ್ಲ ಸಂಗತಿಗಳನ್ನು ಜಿಮ್ಮೆ ಆಸ್ತಿಯ ಕಿಮ್ಮತ್ತು ಅದರ ಮೇಲಿನ ಬೋಜಾ ಮತ್ತು ಜಿಮ್ಮೆ ಆಸ್ತಿಯಿಂದ ಲಾಭ ಹೊಂದುವವರು ಮುಂತಾದ ಯಾವತ್ತು ಸಂಗತಿಗಳನ್ನು ತಿಳಿಸಬೇಕು. ಚಾರಿಟಿ ಕಮೀಶನರರು ಯಾವದೇ ವಿಷಯದಲ್ಲಿ ತಮಗೆ ಬೇಕಾದ ಹೆಚ್ಚಿನ ಸಂಗತಿಗಳನ್ನು ಕೇಳಿಕೊಳ್ಳಬಹುದು. ಮೇಲ್ಕಾಣಿಸಿದ ಮೇರೆಗೆ ಚಾರಿಟಿ ಕಮೀಶನರರು ಅಂಥ ಜಿಮ್ಮೆಯನ್ನು ಸ್ವೀಕರಿಸಬೇಕೋ ಅಥವಾ ಅಲ್ಲಗಳೆಯ ಬೇಕೋ ಎಂಬ ಬಗ್ಗೆ ಮೃತ್ಯು ಪತ್ರ ನಡಿಸತಕ್ಕವರಿಗೆ ಅಥವಾ ಆಸ್ತಿಯ ವ್ಯವಸ್ಥೆ ಮಾಡತಕ್ಕವರಿಗೆ ತಿಳಿಸುವರು. ಮತ್ತು ತಮ್ಮ ಒಪ್ಪಿಗೆಯನ್ನು ತಿಳಿಸುವದಾದದಲ್ಲಿ ಒಪ್ಪಿಗೆಯ ಕರಾರಗಳನ್ನು ಸಹ ತಿಳಿಸುವರು.

೨೩ (೪೪) ೪೪ ನೇ ಕಲಮಿನ ಕಾಣಿಸಿದ ಮೇರೆಗೆ ವೆಚ್ಚದ ಹಣವು ೧೯ ನೇ ಪರಿಶಿಷ್ಟದಲ್ಲಿ ನಮೂದ ಮಾಡಿದಂತೆ ಇರುತ್ತದೆ. ಮತ್ತು ಚಾರಿಟಿ ಕಮೀಶನರರು ಜಿಮ್ಮೆಯನ್ನು ಸ್ವೀಕರಿಸಿದ ನಂತರ ಸ್ವಾಭಾವಿಕವಾಗಿ ಈ ವೆಚ್ಚದ ಹಣವನ್ನು ಕೊಡಬೇಕಾಗುವದು.

೨೪ (೫೪) ಜಿಮ್ಮೆ ಆಸ್ತಿಯಲ್ಲಿ ಹಿತವುಳ್ಳವರು ಅಥವಾ ಅವರ ಪರವಾಗಿ ಲೇಖಿಯಲ್ಲಿ ಅರ್ಜಿ ಮಾಡಿಕೊಂಡಲ್ಲಿ ಚಾರಿಟಿ ಕಮೀಶನರರು:—

(a) ಅರ್ಜದಾರರನ್ನು ಅಥವಾ ಅವರ ಪರವಾಗಿದ್ದ ವಕೀಲರು ಅಥವಾ ಬೇರೆ ಎಜಂಟರು ಕಾಗದಪತ್ರಗಳನ್ನು ತಪಾಸ ಮಾಡಲಿಕ್ಕೆ ಪರವಾನಗಿ ಕೊಡುವರು. ಮತ್ತು ಜಿಮ್ಮೆ ಆಸ್ತಿಗಳ ನೋಂದಣಿ ಪುಸ್ತಕದಲ್ಲಿಯ ದಾಖಲೆಗಳ ನಕಲುಗಳನ್ನು ತೆಗೆದುಕೊಳ್ಳಬಹುದು.

(p) ಅರ್ಜದಾರರು ಖರ್ಚು ಕೊಟ್ಟರೆ ಅವರಿಗೆ ಎಲ್ಲ ಕಾಗದ ಪತ್ರಗಳ ಅಥವಾ ದಾಖಲೆಗಳ ನಕಲುಗಳನ್ನು ಪೂರೈಸುವರು.

ಕೀ. ನ. ನಿ. ನ.

(c) ಅಂಥ ಅರ್ಜದಾರರಿಗೆ ಚಾರಿಟಿ ಕಮೀಶನರರ ಅಧಿಕಾರದಲ್ಲಿದ್ದ ಜಿಮ್ಮೆ ಆಸ್ತಿಗೆ ಸಂಬಂಧಪಟ್ಟ ಸಂಗತಿಗಳನ್ನು ತಿಳಿಸುವರು.

೩೫ (೫೫) ೫೪ ನೇ ನಿಯಮದಲ್ಲಿ ಕಾಣಿಸಿದ ಕರಾರುಗಳಿಗೆ ಅಧೀನವಾಗಿ ಚಾರಿಟಿ ಕಮೀಶನರರು ಕೆಳಗೆ ಕಾಣಿಸಿದ ಫೀ (ರುಸುಮು) ಹಣವನ್ನು ವಸೂಲ ಮಾಡುವರು.

(೧) ಜಿಮ್ಮೆ ಆಸ್ತಿಗಳ ಲೆಖ್ಖಪತ್ರಗಳು ಬಂದುಮಾಡಲ್ಪಟ್ಟಿದ್ದರ ವಿಷಯವಾಗಿ, ಸಂಗತಿಗಳನ್ನು ಶೋಧಮಾಡುವದರ ಸಲುವಾಗಿ– ಪ್ರತಿಯೊಂದು ತಾಸಿಗೆ ೪ ರೂಪಾಯಿ.

(೨) ಯಾವದೇ ಜಿಮ್ಮೆ ಆಸ್ತಿಯ ವಿಷಯವಾಗಿ ಲೆಕ್ಕಪತ್ರಗಳು ತೆರಿದಿಡಲ್ಪಟ್ಟಿದ್ದು ಯಾವದೇ ಒಂದು ವಿಷಯದಲ್ಲಿ ಮಾಹಿತಿಯನ್ನು ದೊರಕಿಸಲು– ೨ ರೂಪಾಯಿ.

(೩) ಬ್ರಹನ್ಮುಂಬಯಿ ಹದ್ದಿಯಲ್ಲಿಯ ಕೋರ್ಟಿನಲ್ಲಿ ಯಾವದೇ ಕಾಗದ ಪುಸ್ತಕಗಳು ಮತ್ತು ಇತರ ದಸ್ತೈವಜ ಹಾಗೂ ಹಾಜರ ಪಡಿಸಲಿಕ್ಕೆ ಪ್ರತಿ ದಿವಸಕ್ಕೆ ೫ ರೂಪಾಯಿ.

(೪) ಮುಂಬಯಿ ಕಿಲ್ಲೆದಲ್ಲಿ ಯಾವದೇ ಕಾಗದ ಪತ್ರಗಳು ಪುಸ್ತಕಗಳು ಅಥವಾ ದಾಖಲೆಗಳು ಹಾಜರ ಮಾಡಲ್ಪಡುವದಿದ್ದಲ್ಲಿ ಪ್ರತಿದಿವ್ಸಕ್ಕೆ ೧೦ ರೂಪಾಯಿ.

(೫) ಮುಂಬಯಿಯಲ್ಲಿ ಆದರೆ ಕಿಲ್ಲೆ ಹದ್ದಿಯನ್ನು ಹೊರ್ತು ಪಡಿಸಿ ಕಾಗದ ಪತ್ರಗಳನ್ನು ಪುಸ್ತಕಗಳನ್ನು ಹಾಜರ ಪಡಿಸಲಿಕ್ಕೆ ಪ್ರತಿದಿವ್ಸ ೧೫ ರೂಪಾಯಿ.

(೬) ಮುಂಬಯಿ ಬಿಟ್ಟು ರಾಜ್ಯದ ಇತರ ಭಾಗಗಳಲ್ಲಿ ಸಂದರ್ಭಕ್ಕನುಸರಿಸಿ ಚಾರಿಟಿ ಕಮಿಶನರರು ನಿರ್ದಿಷ್ಟ ಪಡಿಸಿದ ಮೇರೆಗೆ ರುಸುಮು ಹಣವನ್ನು ಕೊಡಬೇಕಾಗುವದು.

(೭) ಕಾಗದ ಪತ್ರಗಳ ಖರೆ ನಕಲು ಎಂದು ಶರಾ ಬರೆಯಲಿಕ್ಕೆ ೪ ರೂಪಾಯಿ.

(೮) ಯಾವದೇ ಕಾಗದದ ಅಥವಾ ಲೆಖ್ಖ ಪತ್ರದ ದಾಖಲೆಯ ನಕಲಿಗೆ ೯೦ ಶಬ್ದಗಳ ಕಾಗದಕ್ಕೆ ೮ ಆಣೆಯಂತೆ

# Form of Application for Registration of a Public Trust

ಸಾರ್ವಜನಿಕ ಜಿಮ್ಮೆಯ ನೋಂದಣಿಯ ಬಗ್ಗೆ ಅರ್ಜಿಯ ನಮೂನೆಯು

**ಪರಿಶಿಷ್ಟ ೨** (೬ ನೇ ಕಾನೂನನ್ನು ನೋಡಿರಿ)

ಡೆಪ್ಯೂಟಿ ಅಸಿಸ್ಟಂಟ್ ಚಾರಿಟಿ ಕಮೀಶನರ,

.................................................... ಪ್ರದೇಶ/ಉಪ-ಪ್ರದೇಶ, ಇವರಿಗೆ.

..............................................................................................

.................................................. * ಸಾರ್ವಜನಿಕ ಜಿಮ್ಮೆಯ ವಿಷದಲ್ಲಿ

ಮೇಲೆ ಹೇಳಲಾದ ಸಾರ್ವಜನಿಕ ಜಿಮ್ಮೆಯ ಜಿಮ್ಮೆದಾರನಾದ,.... ........... ಎಂಬ ನಾನು, ಸದರಿ ಸಾರ್ವಜನಿಕ ಜಿಮ್ಮೆಯ ನೋಂದಣಿಯ ಬಗ್ಗೆ ಸನ್ ೧೯೫೦ ನೇ ಇಸವಿಯ ಮುಂಬಯಿಯ ಸಾರ್ವಜನಿಕ ಜಿಮ್ಮೆಗಳ ವಿಷಯದ ಆಕ್ಟಿನ ೧೮ ನೇ ಕಲಮಿನನ್ವಯ ಇದರ ಮೂಲಕ ಅರ್ಜಿ ಮಾಡುತ್ತೇನೆ.

೨. ನಾನು ಈ ಕೆಳಗಿನ ಆವಶ್ಯಕ ತಪಶೀಲುಗಳನ್ನು ಸಾದರ ಮಾಡುತ್ತೇನೆ:—

(೧) ಜಿಮ್ಮೆದಾರರ ಹಾಗೂ ಮ್ಯಾನೇಜರರ ಹೆಸರುಗಳು, ಅವರ ವಿಳಾಸಗಳೊಂದಿಗೆ.

(೨) ಜಿಮ್ಮೆದಾರಿಕೆಯ ಹಾಗೂ ವ್ಯವಸ್ಥಾಪಕತ್ವದ ಬಗ್ಗೆ ಉತ್ತರಾಧಿಕಾರದ ವಿಧಾನವು.

* ಇಲ್ಲಿ ಜಿಮ್ಮೆಯ ಪೂರ್ಣ ಹೆಸರನ್ನು ಹಾಗೂ ವಿಳಾಸವನ್ನು ಕೊಡಿರಿ.

(೩) ಜಿಮ್ಮೆಯ ಹೇತುಗಳು:—

(೪) (ಅ) ಜಿಮ್ಮೆಯನ್ನುಂಟು ಮಾಡುವ ಬಗ್ಗೆ ಇರುವ ದಸ್ತೈವಜುಗಳ ತಪಶೀಲುಗಳು (ಪ್ರತಿಗಳನ್ನು ಜೋಡಿಸಿರಿ).

(ಬ) ಜಿಮ್ಮೆಯ ಮೂಲದ ಅಥವಾ ರಚನೆಯ ಬಗ್ಗೆ ಇರುವ ದಸ್ತೈವಜುಗಳನ್ನು ಹೊರ್ತುಪಡಿಸಿ ಇತರ ತಪಶೀಲುಗಳು.

(೫) ಜಿಮ್ಮೆಗೆ ಸಂಬಂಧ ಪಡುವ ಯೋಜನೆಯು ಯಾವದಾದರೂ ಇದ್ದರೆ ಅದರ ತಪಶೀಲುಗಳು (ಪ್ರತಿಯನ್ನು ಜೋಡಿಸಿರಿ).

(೬) ಜಂಗಮ ಆಸ್ತಿ, ಇಂಥ ಆಸ್ತಿಯ ಪ್ರತಿಯೊಂದು ವರ್ಗದ ಅಂದಾಜು ಮಾಡಲಾದ ಬೆಲೆಯೊಂದಿಗೆ (ಟೀಪು— ಇಂಥ ಆಸ್ತಿ ವರ್ಗಗಳ ಅಂದರೆ, ಖುರ್ಚಿ ಮುಂತಾದ್ದರ ಪುಸ್ತಕ ಮುಂತಾದವುಗಳ ಬಗ್ಗೆ, ಪ್ರತಿಯೊಂದು ಸಾಮಾನಿನ ವರ್ಣನೆಯನ್ನು ಮಾಡುವದರ ಬದಲಾಗಿ, ಅವುಗಳ ಸ್ಥೂಲ ವರ್ಣನೆಯನ್ನು ಮಾಡಿ, ನೋಂದುಗಳನ್ನು ದಾಖಲ ಮಾಡತಕ್ಕದ್ದು. ರೋಖು ರಕಮಿನ ಬಗ್ಗೆ ನೋಂದನ್ನು, ಇಂಥ ರೋಖು ರಕಮು ಜನ್ಮಿಯ ಭಂಡವಾಳದ ಭಾಗವಾಗುತ್ತಿದ್ದರೆ ಮಾತ್ರ ಮಾಡತಕ್ಕದ್ದು: ಸ್ಕ್ರಿಪ್ಪುಗಳ ಬಾಬತಿನಲ್ಲಿ. • ಪ್ರತಿಯೊಂದು ತಾರಣದ, ಸ್ಟಾಕಿನ ಶೇರಿನ ಹಾಗೂ ಡಿಬೆಂಚರಿನ ತಪಶೀಲುಗಳನ್ನು, ಅದಕ್ಕೆ ಇರುವ ನಂಬರು ಸಹಿತವಾಗಿ ಕೊಡಿರಿ).

(೭) (ಅ) ಸಿಟಿ ಸರ್ವೆ, ಮ್ಯುನಿಸಿಪಲ್ ಅಥವಾ ಸರ್ವೆನಂಬರು ೧.
ಕ್ಷೇತ್ರಫಲ, ಆಕರಣೆ ಅಥವಾ ಜೂಡಿ ಹಾಗೂ ಯಾವ ಸತ್ತಾಪ್ರಕಾ
ರದ ಮೇಲೆ ಧಾರಣ ಮಾಡಲ್ಪಟ್ಟಿದೆಯೋ ಅಂಥ ಸತ್ತಾಪ್ರಕಾರದ
ವರ್ಣನೆ ಇವುಗಳೊಂದಿಗೆ,[ಸದರಿ ಆಸ್ತಿಗಳಿಗೆ ಸಂಬಂಧಪಡುವ ಹಕ್ಕು ೨.
ಗಳ ಪತ್ರಿಕೆಯಲ್ಲಿಯ, ಸಿಟಿ, ಸರ್ವೆಯ ರಿಕಾರ್ಡಿನಲ್ಲಿಯ ಅಥವಾ
ಮ್ಯುನಿಸಿಪಲ್ ರಿಕಾರ್ಡಿನಲ್ಲಿಯ ನೋಂದುಗಳ ದಾಖಲೆ ಕೊಟ್ಟ
ಪ್ರತಿಗಳನ್ನು ಜೋಡಿಸಿರಿ] ಯಾವ ಗ್ರಾಮದಲ್ಲಿ ಅಥವಾ ಪಟ್ಟಣದಲ್ಲಿ ೩.
ಸ್ಥಾವರ ಆಸ್ತಿಯು ಇರುತ್ತದೋ ಅಂಥ ಗ್ರಾಮವನ್ನು ಅಥವಾ ಪಟ್ಟಣ
ವನ್ನು ತೋರಿಸುವ, ಸದರಿ ಸ್ಥಾವರ ಆಸ್ತಿಯ ವಿವರಗಳು.

(ಬ) ಪ್ರತಿಯೊಂದು ಸ್ಥಾವರ ಆಸ್ತಿಯ ಅಂದಾಜು ಮಾಡ ೧.
ಲಾದ ಬೆಲೆಯು:—

(೮) ಜನ್ಮಿಯ ಉತ್ಪನ್ನದ ಮಾರ್ಗಗಳು.

(೯) ಸರಾಸರಿ ಒಟ್ಟು ವಾರ್ಷಿಕ ಉತ್ಪನ್ನ:—

(೧೦) ಸರಾಸರಿ ವಾರ್ಷಿಕ ಖರ್ಚು:—

(೧೧) ಈ ಕೆಳಗಿನವುಗಳ ಮೇಲಿನ ಸರಾಸರಿ ವಾರ್ಷಿಕ ವೆಚ್ಚದ ರಕಮು :—

(ಅ) ಜಿಮ್ಮೆದಾರರಿಗೆ ಹಾಗೂ ಮ್ಯಾನೇಜರರಿಗೆ ಪ್ರತಿ ಫಲ.

(ಬ) ಸಿಬಂದಿ ಹಾಗೂ ನೌಕರವರ್ಗ

(ಕ) ಧಾರ್ಮಿಕ ಹೇತುಗಳು

(ಡ) ಕಿರಕೋಳ ಬಾಬುಗಳು

(೧೨) ಜಿಮ್ಮೆಯ ಆಸ್ತಿಯ ಮೇಲೆ ಭೋಜಾಗಳು ಯಾವವಾದರೂ ಇದ್ದರೆ ಅವುಗಳ ತಪಶೀಲುಗಳು:—

(೧೩) ಜಿಮ್ಮೆಯ ಆಸ್ತಿಗೆ ಸಂಬಂಧಪಡುವ ಮೂಲ ದಸ್ತೈವಜಗಳ ತಪಶೀಲುಗಳು ಮತ್ತು ಅವುಗಳ ತಾಬೆ ಇರುವ ಜಿಮ್ಮೆದಾರರ ಹೆಸರುಗಳು :

(೧೪) ಶರಾಗಳು ಯಾವವಾದರೂ ಇದ್ದರೆ:—

೩ ....ರೂಪಾಯಿಗಳು (——) ಫೀಯು ಇದರ ಜೊತೆಗೆ ಇರುತ್ತದೆ

೪ ಜಿಮ್ಮೆಯ ಸಂಬಂಧದಿಂದ ಜಿಮ್ಮೆದಾರನಿಗೆ ಅಥವಾ ಮ್ಯಾನೇಜರನಿಗೆ ಬರೆಯತಕ್ಕ ಯಾವದೇ ಪತ್ರವನ್ನು ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡಬಹುದು.

ಹೆಸರು

ವಿಳಾಸ

ತಾರೀಖು——　　　　ಅರ್ಜಿದಾರನ ಸಹಿ——

—— ಇಲ್ಲಿಯ ನಿವಾಸಿಯಾದ ——ಇಲ್ಲಿ ವಾಸಿಸುವವನಾದ ಮೇಲೆ ಹೆಸರು ಹೇಳಲಾದ——ಎಂಬ ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವದೇನಂದರೆ, ಮೇಲಿನ ಅರ್ಜಿಯಲ್ಲಿ ಹೇಳಲಾದ ಸಂಗತಿಯು ನನ್ನ ಉತ್ತಮ ಮಾಹಿತಿಯ ಹಾಗೂ ನಂಬಿಕೆಯ ಮಟ್ಟಿಗೆ ನಿಜವಿರುತ್ತದೆ.

ಈ ಹೊತ್ತು ತಾರೀಖು———ತಿಂಗಳು——— )
ಸನ್ ೧೯೫—ನೇ ಇಸವಿಯ ದಿವಸ ಮೇಲೆ ಹೇಳಿದ ) ಸಹಿ—
————ಇಲ್ಲಿ ಪ್ರತಿಜ್ಞಾಪೂರ್ವಕವಾಗಿ ಹೇಳಲ್ಪಟ್ಟಿತು.

ನನ್ನ ಮುಂದೆ

## ಪರಿಶಿಷ್ಟ ೩

(೧೩ (೧) ನಿಯಮವನ್ನು ನೋಡಿರಿ)

ಸಾರ್ವಜನಿಕ ಜಿಮ್ಮೆ ನೋಂದಣಿ ಪುಸ್ತಕದಲ್ಲಿ ನಮೂದಿಸಲ್ಪಟ್ಟ ವಿಷಯಗಳಲ್ಲಿ ಬದಲಾವಣೆಗಳು ಸಂಭವಿಸಿದ್ದರೆ ಅಥವಾ ಮಾಡಬೇಕಾಗಿದ್ದರೆ ಅವುಗಳ ವರದಿ

ಸಾರ್ವಜನಿಕ ಜಿಮ್ಮೆ ಆಸ್ತಿಯ
ನೋಂದಣಿ ನಂಬರು ಮತ್ತು ಹೆಸರು:—

| ಬದಲಾವಣೆಯ ಸ್ವರೂಪ | ಬದಲಾವಣೆಯ ಕಾರಣ | ಶರಾ ಏನಾದರು ಇದ್ದರೆ |
|---|---|---|
| ೧ | ೨ | |

ತಾರೀಖು

ವರದಿ ಮಾಡುವ ಜಿಮ್ಮೆ
ದಾರರ ಸಹಿ ಮತ್ತು ವಿಳಾಸ

## ಪರಿಶಿಷ್ಟ ಅ

(೧೭ (೧)ನೇ ನಿಯಮವನ್ನು ನೋಡಿರಿ ೧ ೧೧-೧೯೫ನೇ ತಿದ್ದುಪಡಿಯ ಮೇರೆಗೆ)

ಸಾರ್ವಜನಿಕ ಜಿಮ್ಮೆಯ ಹೆಸರು:—

ನೇ ............................ತಾರೀಖಿಗೆ ಇದ್ದ ಆಥಾವೆ ಪತ್ರ

| ನಿಧಿ ಮತ್ತು ಸಾಲ | ರೂ. ಆ. ಪೈ. | ಆಸ್ತಿ |
|---|---|---|
| ಜಿಮ್ಮೆಯ ನಿಧಿ ಅಥವಾ ಮೂಲ ಹಣ:— | | ಸ್ಥಾವರ ಆಸ್ತಿಗಳು [ಅವುಗಳ ಬೆಲೆಯನ್ನು ಕೊಟ್ಟು ಬೇರೆ ಬೇರೆ ತೋರಿಸಿರಿ] ವರ್ಷದಲ್ಲಿ ಹೆಚ್ಚಾಗಿದ್ದರೆ ಅಥವಾ ಕಡಿಮೆ ಆಗಿದ್ದರೆ ಹಣ ಹಾಕಿದ್ದು ಅವುಗಳ ಬೆಲೆಯನ್ನು ಕೊಟ್ಟು ಬೇರೆ ಬೇರೆ ತೋರಿಸಿರಿ. ಫರ್ನಿಚರ ಸಾಮಾನುಗಳು ಕಡೆಯ ಆಥಾವೆ ಪತ್ರದ ಪ್ರಕಾರ ಉಳಿದವುಗಳು. ವರ್ಷಾವಧಿಯಲ್ಲಿ ಹೆಚ್ಚಾಗಿದ್ದರೆ ಅಥವಾ ಕಡಿಮೆ ಆಗಿದ್ದರೆ ಅದನ್ನು ತೋರಿಸಿರಿ. |
| ಕಡೆಯ ಆಥಾವೆ ಪತ್ರದ ಪ್ರಕಾರ ಸಿಲುಕು ವರ್ಷಾವಧಿಯಲ್ಲಿ ಸರಿಪಡಿಸಿದ್ದು [ಪೂರ್ಣ ವಿವರಣೆ ಕೊಡಿರಿ] | | |
| ಬೇರೆ ಮೀಸಲಾಗಿಟ್ಟ ನಿಧಿಯು | | |
| ಬೆಲೆ ಕಡಿಮೆ ಮಾಡಿದಾಗ್ಗೆ ಉಪಯೋಗಿಸುವ ನಿಧಿ | | |
| ಹಾನಿತಟ್ಟಿದಾಗ್ಗೆ ಉಪಯೋಗಿಸುವ ನಿಧಿ | | |
| ಕಾಯ್ದಿಟ್ಟ ನಿಧಿ | | |
| ಇನ್ನಿತರ ನಿಧಿ | | |
| ಸಾಲಗಳು [ಭೋಜಾ ಮತ್ತು ಭೋಜಾ ಇಲ್ಲದೆ ಇದ್ದವುಗಳು] | | |
| ಜಿಮ್ಮೆದಾರರಿಂದ | | |
| ಇತರರಿಂದ | | |

ಕೋಶಗಾರಿಕೆಗಳು ಖರ್ಚಿನ ಬಗ್ಗೆ ಮುಂಗಡವಾಗಿ ಕೊಟ್ಟ, ಹಣ ಭಾಡಿಗೆ ಮತ್ತು ಇತರ ಠೇವುಗಳು ಇನ್ನಿತರ ಜಮಾ ಬಾಕಿ ಹಣವು

ಆದಾಯ ಮತ್ತು ವೆಚ್ಚದ ಲೆಕ್ಕ:—

ಕಡೆಯ ಆಢಾವೆ ಪತ್ರದ ಪ್ರಕಾರ ಬಾಕಿ ಉಪಯೋಗಿಸಿದ್ದರೆ ಅಷ್ಟುಹಣ ಕಡಿಮೆಮಾಡಿ ಉಳಿದದ್ದು

ಆದಾಯ ಮತ್ತು ವೆಚ್ಚದ ಲೆಕ್ಕದ ಪ್ರಕಾರ ಹೆಚ್ಚು ಕಡಿಮೆ ಆದದ್ದು.

ರೂ. ...............

ಮುಂದಿನ ಪಾನಿಗೆ ತೆಗೆದುಕೊಂಡದ್ದು

ಸಾಲಗಳು (ಭೋಜಾ ಮತ್ತು ಭೋಜಾ ಇಲ್ಲದೆ ಇದ್ದವುಗಳು)

ತಿರುಗಿ ಕೊಡುವ ವಿದ್ಯಾರ್ಥಿ ವೇತನಗಳು ಬೇರೆ ಸಾಲಗಳು ಮುಂಗಡವಾಗಿ ಕೊಟ್ಟದ್ದು.

ಜಿಮ್ಮೆದಾರರಿಗೆ, ನೌಕರರಿಗೆ, ಕಾಂಟ್ರ್ಯಾಕ್ಟದಾರರಿಗೆ, ವಕೀಲರಿಗೆ ಇನ್ನಿತರರಿಗೆ—

ರೂ ...............

ಮುಂದಿನಪಾನಿಗೆ ತೆಗೆದುಕೊಂಡದ್ದು.

ಹಿಂದಿನ ಶೇರಿಜು

ಬರತಕ್ಕ ಉತ್ಪನ್ನ ಭಾಡೆ ಬಡ್ಡಿ ಇನ್ನಿತರ ಉತ್ಪನ್ನ.
ರೋಖು ಮತ್ತು ಬ್ಯಾಂಕಿನ ಸಿಲುಕು
(a) ಚಾಲತಿ ಲೆಖ್ಖದಲ್ಲಿ ಅಥವಾ ನಿಶ್ಚಿತ ಠೇವು ರೀತಿಯಲ್ಲಿ [ಇಲ್ಲಿ ಬ್ಯಾಂಕಿನ ಹೆಸರು ಮತ್ತು ಯಾರ ಹೆಸರಿನಿಂದ ಇಟ್ಟಿದೆ ಸವಿಸ್ತಾರವಾಗಿ ಬರೆಯಿರಿ.]
(b) ಜಿಮ್ಮೆದಾರರ ಕಡೆಗೆ (ಹೆಸರು ಕೊಡಿರಿ)
(c) ವ್ಯವಸ್ಥಾಪಕರ ಕಡೆಗೆ (ಹೆಸರು ಕೊಡಿರಿ)

ಒಟ್ಟು ರೂ...............

ಹಿಂದಿನ ಶೇರಿಜು

ಒಟ್ಟು ರೂ.... .........

ಮೇಲ್ಕಾಣಿಸಿದ ಆಢಾವೆ ಪತ್ರವು ನನ್ನ ಅಥವಾ ನಮ್ಮ ತಿಳುವಳಿಕೆಯ ಪ್ರಕಾರ ಜಿಮ್ಮೆಯ ನಿಧಿ ಹಣ, ಸಾಲ ಆಸ್ತಿಮತ್ತು ಉತ್ಪನ್ನದ ಬಗ್ಗೆ ನಿಜವಾದ ಸಂಗತಿ ಯಿಂದ ಕೂಡಿದ್ದು ಅದೆ.

ತಾ...........................

ಜಿಮ್ಮೆದಾರರು—

ಲೆಖ್ಖ ತಪಾಸಗಾರರು

## ಪರಿಶಿಷ್ಟ ೯

(೧೭ (೧) ನೇ ನಿಯಮವನ್ನು ನೋಡಿರಿ)

**ಸಾರ್ವಜನಿಕ ಜಿಮ್ಮೆಯ ಹೆಸರು:—**

ವರೆಗೆ ವಾರ್ಷಿಕ ಆದಾಯ ಮತ್ತು ವೆಚ್ಚಗಳ ಲೆಕ್ಕ

| ಖರ್ಚು | ರೂ.ಆ.ಪೈ. | ಉತ್ಪನ್ನ | ರೂ.ಆ.ಪೈ. |
|---|---|---|---|
| ಆಸ್ತಿಗಳ ವಿಷಯದಲ್ಲಿ ಖರ್ಚಿನ ಬಾಬುಗಳು | | ಭಾಡೆದಿಂದ — ಬರತಕ್ಕದ್ದು | |
| ಕೆರಿಗೆ ಟ್ಯಾಕ್ಸು ಕರ | | ವಸೂಲ ಬಂದದ್ದು | |
| ದುರಸ್ತಿ ಮತ್ತು ಆಸ್ತಿ ಜೋಪಾನದ ಬಗ್ಗೆ ಪಗಾರ | | | |
| ವಿಮಾ ಇಳಿಸಿದ್ದು | | ಬಡ್ಡಿಯಿಂದ — ಬರತಕ್ಕದ್ದು | |
| ಬೆಲೆ ಕಡಿಮೆ ಆದದ್ದು | | ವಸೂಲ ಬಂದದ್ದು | |
| | | ಸೆಕ್ಯುರಿಟಿಗಳ ಮೇಲಿ | |
| ಇತರ ಖರ್ಚು | | ಸಾಲಗಳ ಮೇಲಿಂದ | |
| ಸಿಬ್ಬಂದಿ ಖರ್ಚಿಗೆ | | ಬ್ಯಾಂಕುಗಳ ಲೆಕ್ಕದಿಂದ | |
| ಜಿಮ್ಮೆದಾರರಿಗೆ ಪಗಾರ | | ಡಿವ್ಹಿಡೆಂಡುಗಳಿಂದ ಹಣ ಇಲ್ಲವೆ | |
| ಮಠದ ಅಧಿಕಾರಿಗಳಿಗೆ ಪಗಾರ, | | ಇನ್ನಿತರ ರೀತಿಯಿಂದ ಬಂದ ದೇಣಿಗೆ | |
| ಮತ್ತು ಮಠದ ಖರ್ಚು ಸಹಿತ | | ಸಹಾಯಧನ | |
| ಕಾಯದೆ ಕ್ರಮಗಳ ಬಗ್ಗೆ ಖರ್ಚು | | ಬೇರೆ ಉತ್ಪನ್ನದ ಮಾರ್ಗಗಳು | |

| ಖರ್ಚು | ರೂ.ಆ.ಪೈ. | ಉತ್ಪನ್ನ | ರೂ. ಆ. ಪೈ. |
|---|---|---|---|
| ಲೆಕ್ಕ ತಪಾಸಣೆಯ ಖರ್ಚು | | ಕಾಯ್ದಿಟ್ಟ ಧನದಿಂದ ವರ್ಗಾಯಿಸಲ್ಪಟ್ಟ ಹಣ | |
| ವರ್ಗಣಿ ಮತ್ತು ರುಸುಮುಕೊಟ್ಟ ಬಾಬತು ರದ್ದು ಮಾಡಲ್ಪಟ್ಟ ಹಣದ ಬಗ್ಗೆ | | ಆಧಾವೆ ಪತ್ರಕ್ಕೆ ಕೊರತೆ ಬಿದ್ದ ಹಣಕ್ಕೆ ಎರಿಸಿದ್ದು | |
| (a) ವಸೂಲಾಗದೇ ಇದ್ದ ಸಾಲಗಳು | | | |
| (b) ತಿರುಗಿ ಕೊಡುವ ವಿದ್ಯಾರ್ಥಿ ವೇತನ | | | |
| (e) ವಸೂಲಾಗದೇ ಇದ್ದ ಭಾಡೆ | | | |
| (d) ಬೇರೆ ಕಲಮುಗಳು | | | |
| ಕಿಂಮತಿಗಳ ಖರ್ಚು | | | |
| ಬೆಲೆ ಕಡಿಮೆ ಆದ ಬಗ್ಗೆ ಖರ್ಚು | | | |
| ರಿಝರ್ವ ಫಂಡಿಗೆ ವರ್ಗಾಯಿಸಿದ ಹಣ | | | |
| ಜಿಮ್ಮೆಯ ಉದ್ದೇಶಗಳಿಗೆ ಖರ್ಚು | | | |
| (a) ಧಾರ್ಮಿಕ | | | |
| (b) ಶೈಕ್ಷಣಿಕ | | | |
| (c) ಔಷಧೋಪಚಾರ | | | |
| (d) ಬಡತನ ಪರಿಹಾರ | | | |
| (e) ಇನ್ನಿತರ ಧರ್ಮಾರ್ಥ ಉದ್ದೇಶಗಳು | | | |

ಆಧಾವೆ ಪತ್ರಕ್ಕೆ ತೆಗೆದುಕೊಂಡ ಬಗ್ಗೆ ಖರ್ಚು ಹಾಕಿದ್ದು | ರೂ. | ಆ. | ಪೈ.

ವಟ್ಟು ರೂ. ________

ವಟ್ಟು ರೂ. ____

ತಾರೀಖು:--

ಜಿಮ್ಮೆದಾರ—

ಲೆಖ್ಖ ತಪಾಸಣೆಗಾರರು

## ಪರಿಶಿಷ್ಟ ೧೩

(೩೦ (೧) ನೇ ನಿಯಮವನ್ನು ನೋಡಿರಿ)

ಧರ್ಮಾದಾವ ಹಣದ ಲೆಕ್ಕದ ತೇಳಿಕೆ

(೧) ಯಾವ ಹೆಸರಿನಿಂದ ಧರ್ಮಾದಾವ ಕೂಡಿ ಸಲ್ಪಟ್ಟಿತು.

(೨) ಯಾರ ಕಡೆಗೆ ಧರ್ಮಾದಾವ ಹಣ ಸಂಗ್ರಹವು ಬಂದಿದೆಯೋ ಅಂಥ ಜಿಮ್ಮೆದಾರನ ಹೆಸರು ಮತ್ತು ವಿಳಾಸ.

(೩) ಯಾವ ಅವಧಿಯವರೆಗೆ ಧರ್ಮಾದಾವ ಅಸ್ತಿತ್ವದಲ್ಲಿರುತ್ತದೆ.

(೪) ಯಾವ ಉದ್ದೇಶದಿಂದ ಸಂಗ್ರಹವು ಮಾಡಲ್ಪಟ್ಟಿದೆ.

(೫) ಯಾವ ದರದಂತೆ ಮತ್ತು ಯಾವ ತಳಹದಿಯ ಮೇಲೆ ಸಂಗ್ರಹವು ಮಾಡಲ್ಪಟ್ಟಿದೆ.

(೬) ಲೆಕ್ಕ ಮಾಡತಕ್ಕ ವರ್ಷದ ಪ್ರಾರಂಭ

(೭) ಯಾವ ವರ್ಷದ ಸಲುವಾಗಿ ಲೆಕ್ಕವು ಹಾಜರ ಮಾಡಲ್ಪಟ್ಟಿದೆ.

(೮) ಬಾಕಿ ಉಳಿದದ್ದು

(೯) ವರ್ಷಾವಧಿಯಲ್ಲಿ ಕೂಡಿಸಿದ ಹಣ

(೧೦) ೮ ಮತ್ತು ೯ ನೇ ಕಲಮುಗಳ ಒಟ್ಟು ಹಣ

(೧೧ ವರ್ಷಾವಧಿಯಲ್ಲಿ ಭಟವಾಡೆ ಮಾಡಿದ ವಿವರಣೆ.

(೧೨) ಒಟ್ಟು ಭಟವಡೆ

(೧೩) ಮುಂದೆ ಎಳೆದ ಸಿಲುಕು.

(೧೪) ಶರಾ.

ತಾ. .... .... ....

ಜಿಮ್ಮೆದಾರ ನಾತೆದಿಂದ ಧರ್ಮಾದಾವ ಹಣವನ್ನು ಇಟ್ಟು ಕೊಂಡವರ ಸಹಿ

